೧೯೩೭ ನೆಯ ಇಸ್ವಿಯ

ಮುಂಬಯಿ ಯುನಿವ್ಹರ್ಸಿಟಿಯ ಮ್ಯಾಟ್ರಿಕ್ಯುಲೇಶನ

ಪರೀಕ್ಷೆಗೆ ನಿಯಮಿಸಲ್ಪಟ್ಟ

# ಗದ್ಯ ಪದ್ಯಸಂಗ್ರಹ.



II

೧೦



ಂಬಯಿ ಯುನಿವ್ಹರ್ಸಿಟಿಯ ಪರವಾಗಿ

ಪ್ರಕಾಶಕರು

ಚಿಂತಕ ಪ್ರಿಂಟಿಂಗ ಪ್ರೆಸ್

ವಿಜಾಪುರ.

೧೯೩೭

ಬೆಲೆ ೧| ರೂ.

೧೯೩೭ ನೆಯ ಇಸ್ವಿಯ

ಮುಂಬಯಿ ಯುನಿವ್ಹರ್ಸಿಟಿಯ ಮ್ಯಾಟ್ರಿಕ್ಯುಲೇಶನ

ಪರೀಕ್ಷೆಗೆ ನಿಯಮಿಸಲ್ಪಟ್ಟ

# ಗದ್ಯ ಪದ್ಯಸಂಗ್ರಹ.





ಮುಂಬಯಿ ಯುನಿವ್ಹರ್ಸಿಟಿಯ ಪರವಾಗಿ

ಪ್ರಕಾಶಕರು

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

೧೯೩೬

ಬೆಲೆ ೧। ರೂ.

# Note.



೧ ನೇ ಆವೃತ್ತಿ. ೧೫೦೦ ಪ್ರತಿಗಳು. ೧೯೩೬



Printed and published by Rao-saheb **P. G, Halkatti,** at the **Hitachintaka Printing Press** house No. 1620 (A) Upli Buruz Road Bijapur., for the University of Bombay.

# ಪ್ರಸ್ತಾವನೆ.

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸಕ್ರಮನಿಯಾಮಕ ಮಂಡಲದವರು ಮ್ಯಾಟ್ರಿಕ್ ಪರೀಕ್ಷೆಗೆ ಈ ವರುಷ ಕನ್ನಡ ಗದ್ಯಪದ್ಯಗಳನ್ನು ಸಂಗ್ರಹಿಸಲು ನಿಶ್ಚಯಿಸಿದರು. ಕನ್ನಡದಲ್ಲಿ ವಿದ್ಯಾರ್ಥಿಗಳಿಗೆ ಅಭಿರುಚಿಹುಟ್ಟಿ ಮಹತ್ವದ ಕೆಲವು ಕವಿಗಳ ಮತ್ತು ಗ್ರಂಥಕಾರರ ಪರಿಚಯವಾಗಬೇಕೆಂಬುದೇ ಅವರ ಉದ್ದೇಶ. ಆದುದರಿಂದ ಈ ಸಂಗ್ರಹದಲ್ಲಿ ಆದಷ್ಟು ಸುಲಭ ಮತ್ತು ಸಂಕೀರ್ಣ ಗದ್ಯಪದ್ಯಗಳನ್ನು ಸಂಗ್ರಹಿಸಲಾಗಿದೆ. ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಅಂಕುರವನ್ನು ಮೂಡಿಸುವದೂ ಅದನ್ನು ಬಲಿಸುವದೂ ಶಿಕ್ಷಕ ವರ್ಗದ ಕೈಯೊಳಗಿನದು. ವ್ಯಾಕರಣ ಛಂದಸ್ಸುಗಳ ಕಡೆಗೆ ವಿಶೇಷ ಲಕ್ಷಗೊಡಬೇಕೆಂದು ಶಿಕ್ಷಕ ವರ್ಗಕ್ಕೆ ಸೂಚಿಸುವೆವು. ಈ ಸಂಗ್ರಹದಲ್ಲಿ ಬಂದ ಗದ್ಯಪದ್ಯಗಳ ಭಾಗಗಳನ್ನು ತೆಗೆದುಕೊಳ್ಳಲು ಅನುಮತಿಯನ್ನಿತ್ತು ಸಹಾಯ ಮಾಡಿದ ಆಯಾ ಗ್ರಂಥಗಳ ಬರಹಗಾರರಿಗೂ ಪ್ರಕಾಶಕರಿಗೂ ಉಪಕೃತರಾಗಿರುವೆವು. ಆದರೆ ಅನುಮತಿಯನ್ನು ತೆಗೆದುಕೊಳ್ಳಲು ಅನಿರೀಕ್ಷಿತವಾಗಿ ಅನೇಕ ತೊಂದರೆಗಳು ಬಂದ ಮೂಲಕ ಗ್ರಂಥವು ತಡವಾಗಿ ಪ್ರಕಟವಾಯಿತು. ಇದಕ್ಕೂ ಪ್ರೂಫುಗಳನ್ನು ತಿದ್ದಲಿಕ್ಕೆ ಬಹು ಅವಸರವಾದ್ದರಿಂದ ಮುದ್ರಣ ದೋಷಗಳೂ ಉಳಿದಿದ್ದಕ್ಕೂ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

ಈ ಕಾರ್ಯದಲ್ಲಿ ರಾ॥ ಸಾ॥ ಪಿ. ಜಿ. ಹಳಕಟ್ಟಿ ಇವರು ಬಹಳ ಸಹಾಯ ಮಾಡಿದ್ದಕ್ಕೆ ನಾವು ಅವರಿಗೆ ಬಹು ಉಪಕೃತರಾಗಿರುವೆವು.

ಶಿ. ಚೆ. ನಂದೀಮಠ.

ಮುಂಬಯಿ ವಿಶ್ವವಿದ್ಯಾಲಯ — ಚೇರಮನ್ನ

೧-೬-೩೬ — ಕನ್ನಡ ಅಭ್ಯಾಸ ನಿಯಾಮಕ ಮಂಡಳ.

# ಅನುಕ್ರಮಣಿಕೆ.

## ಪದ್ಯಸಂಗ್ರಹ.


| | ವಿಷಯ. | ಪುಟ. |
|---|---|---|
| ೧ | ಹರಿಹರನ ರಗಳೆಗಳು–ಕಣ್ಣಪ್ಪನಮಹಾತ್ಮೆ. | ೧-೫ |
| ೨ | ಸರ್ವಜ್ಞನ ವಚನಗಳು. | ೬-೮ |
| ೩ | ವೃಷಭೇಂದ್ರವಿಜಯ ಕೋಳೂರು ಕೊಡಗೂಸಿನ ಕಥೆ. | ೯-೧೫ |
| ೪ | ನೀತಿಮಂಜರಿ. | ೧೬-೧೯ |
| ೫ | ಭರ್ತೃಹರಿಶತಕ | ೨೦-೨೧ |
| ೬ | ರತ್ನಾಕರಾಧೀಶ್ವರಶತಕ | ೨೨-೨೩ |
| ೭ | ಸೋಮೇಶ್ವರಶತಕ. | ೨೪-೨೫ |
| ೮ | ಹದಿಬದೆಯಧರ್ಮ. | ೨೬-೨೯ |
| ೯ | ಶಾಸನಗಳಲ್ಲಿಯ ವರ್ಣನೆಗಳು. | ೩೦-೩೨ |
| ೧೦ | ಭರತೇಶವೈಭವ. | ೩೩-೩೫ |
| ೧೧ | ತೊರವೆರಾಮಾಯಣ. | ೩೬-೩೯ |


## ಗದ್ಯಸಂಗ್ರಹ.


| | | |
|---|---|---|
| ೧ | ಸ್ವಪ್ನವಾಸವದತ್ತ ನಾಟಕಂ. | ೪೩-೫೭ |
| ೨ | ಕೆಲವು ಸಣ್ಣ ಕತೆಗಳು. ರಂಗನ ಮದುವೆ. | ೫೮-೬೯ |
| ೩ | ವಚನಗಳು. | ೭೦-೮೧ |
| ೪ | ಕನ್ನಡ ವಚನಕಾದಂಬರಿ. | ೮೨-೯೦ |
| ೫ | ಕನ್ನಡಸಾಹಿತ್ಯ. | ೯೧-೧೦೩ |
| ೬ | ಬೆಳ್ಳಿಯಚಿಕ್ಕೆ | ೧೦೪-೧೩೭ |


## ಅನುಬಂಧಗಳು.


| | | |
|---|---|---|
| ೧ | ಛಂದಸ್ಸು | ೧೩೯-೧೪೪ |
| ೨ | ವಚನಕಾರರ ಮುದ್ರಿಕೆಗಳು | ೧೪೫-೧೪೭ |

# ಹರಿಹರನ ರಗಳೆಗಳು.

## ಕಣ್ಣಪ್ಪನ ಮಹಾತ್ಮೆ.

ಇರುತಿರುತೊಂದು ದಿವಸಂ ಬೇಂಟೆಗೆಂದಲ್ಲಿ
ಚರಿತದಿಂ ಕಣ್ಣಂದನೆಳ್ದು ಬರುತಿರ್ಪಲ್ಲಿ,
ಬಲದ ಕಣ್ಪುರ್ಬು ಮೈವೆರ್ಚಿ ಕೆತ್ತುತ್ತುಮಿರೆ
ನಲಿನಲಿದು ಬೇಂಟೆ ಲೇಸಪ್ಪುದೆಂದೆನುತುಮಿರೆ,
ಇತ್ತ ತಿರುಕಾಳತ್ತಿ ಮಲೆಯೊಳಿರ್ದೀಶ್ವರಂ
ಚಿತ್ತದೊಳ್ನೆನೆದು ಮಾಯಾಮೃಗವ ಶಂಕರಂ
ತೋರಿ ಸುಳಿದೆನ್ನತ್ತ ಕೊಂಡುಬಾರೆಂದೆನಲು
ಮೀರಿ ಗಳಗಳನಿಳಿದು ಬಂದುದಾ ಬೆಟ್ಟದೊಳು
ಬಂದು ದೂರದೊಳೆ ಕಣ್ಬೆಳಕೆಯೊಳ್ಸುಳಿಸುಳಿದು
ನಿಂದು ನಡೆನಡೆದು ನಲಿದಾಡುತುಂ ಹೊಳೆಹೊಳೆದು
ತೋರೆ, ಬೆಂಬತ್ತಿದಂ ಮೃಗದ ಬೆಂಬಳಿವಿಡಿದು
ಮೀರಿಯಡದೇರುತ್ತಲಿಳಿವುತ್ತೆ ನಡೆನಡೆದು

ಪೊಕ್ಕಲ್ಲಿ ಪೊಕ್ಕು, ಪರಿದಲ್ಲಿ ಬೆನ್ನೊಳ್ಪರಿದು
ಮಿಕ್ಕಲ್ಲಿ ಮಿಕ್ಕು, ನೆಗೆದಲ್ಲಿ ಒಡನೆಯೆ ನೆಗೆದು,
ಮನಮುಮಂ ಕಣ್ಣುಮಂ ಮೃಗದ ಬೆಂಬಳಿಗಿತ್ತು,
ತನುವುಮಂ ತವಕಮುಂ ಹಿಡಿದೆಸೆವ ಬಗೆಗಿತ್ತು,
ಕೈಲಾಸಶಿಖರಸೋಪಾನವನಡರ್ವಂತೆ
ಕಾಳತ್ತಿನಾಥನಂ ಕ್ಷಣದೊಳಗೆ ಕಾಣ್ಬಂತೆ
ಇಂತು ಬರೆವರೆ ಕೊಂಡು ಬಂದುದಾ ಮೃಗವಲ್ಲಿ
ಕಂತುಹರನಿರ್ಪ ದೇವಾಲಯದ ಮುಂದಲ್ಲಿ
ಮಾಯವಾದುದು ಮೃಗಂ ನೋಡನೋಡಲ್ಸುಳಿದು.

ಆಯೆಡೆಯೊಳೆಲ್ಲಿಯುಮನರಸಿ ಕಾಣದೆ ಮುಳಿದು
ಶಿವನಿಳಯದತ್ತಲೆಯ್ತಂದನಾ ಕಣ್ಣಂದ–

ನವಚಿತ್ರಸುರವಣಿಸಿ ತೆರೆ ತೆರೆ ಕವವನೆಂದ.
ಎನ್ನವನೆ, ತೆರೆ ಕದವನೆನ್ನವನೆ, ತೆರೆ ಎನಲ್
ಪನ್ನಗಧರಂ ಕದಂದೆರೆಯೆ ತಾಂ ಭೋಂಕೆನಲ್

ನೋಡು ಮಾದೇವನೇ, ಕೇಳು ನೀನೆನ್ನವನೆ.
ನೋಡುವೆಂ ನಿನ್ನ ನನ್ನಿಗಳನಿಂದೆನ್ನವನೆ,
ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ;
ಆದಲ್ಲಿ ಭಾಗೆಯಂ ವಂಚಿಸೆಂ ಕೊಳ್ಳದಂ.
ಎನಲಲ್ಲಿ ಶಿವಲಿಂಗದೊಳಗೆ ನಗುತೀಶ್ವರಂ
ಎನಗಿವನ ಕಂಡು ಮೋಹಮರಿಪೆನುತ ಶಂಕರಂ
ನೋಡುವೆನಿದಕೇನೆನುತ್ತೆ ಮೃಗವಂ ತೋರೆ,
ನೋಡಿಕೊಂಡಾಹಾ ಎನುತ್ತೆ ನಂಬುಗೆಯೇರೆ

ಇನ್ನಗಲೆನಿನ್ನಗಲೆನಯ್ಯಯ್ಯ ನಿನ್ನುವಂ
ಮುನ್ನವರಿಯದೆ ಕೆಟ್ಟೆನಿನಿತುವರನಿನ್ನುವಂ
ಎನಗುಳ್ಳವಂ ನೀನೆ; ನಿನಗುಳ್ಳವಂ ನಾನೆ.
ನಿನಗೇನುವಂ ಕೊರತೆ ಎನ್ನವನೆಯಾಳ್ದನೆ?
ಬಿಡುವನಲ್ಲಂ ನಿನ್ನನಿನಿತು ದಿಟವುಳ್ಳನಂ
ನಡೆಯಿಸಿಕೊಳಲ್ಬಲ್ಲೆ ಇಂತಪ್ಪ ಬಂಟನಂ.
ಅಂಜದಿರ್ಬಡವಾಗದಿರ್ಚಿಂತಿಸದಿರೆಲವು,
ಸಂಜೆಯಾದೊಡೆಯಿರಿಸಿ ಪೋಗೆನಿನ್ನೆಲವೆಲವು.

ಎಂದು ಕುಣಿದಾಡುತುಂ ಕಂಡು ಹುಲ್ಲೆಯನೆಚ್ಚು
ತಂದಂಬುಸಹಿತವಿದೆ ದೇವ, ಹುಸಿಯೇಂ ನಚ್ಚು.
ಕೊಂಡುಬಂದೆನ್ನವನೆಯುಣ್ಣವನೆಯುಣ್ಣವನೆ
ಅಂಡಲೆವುತೆನ್ನವನೆ ಸವಿನೋಡು ನೋಡುವನೆ.

ಎನಲಲ್ಲಿ ಶಂಕರಂ ಕೈಕೊಂಡ ಮಾಳ್ಕೆಯಿಂ
ತನತನಗೆ ಭೂತಕ್ಕೆ ಕೊಟ್ಟನೊಲ್ದರ್ಕೆಯಿಂ
ಆತುರದ ಪ್ರೇಮಮಂ ತಾನೆಯಾರೋಗಿಸಂ
ಭೂತಸಂಕುಲಕೆ ಮಾಂಸವನಿತ್ತು ತಣಿಯಿಸಂ.

೩

ಮುಂದೆ ದೇವಾಲಯದ ಬಾಗಿಲುಗಳಿಕ್ಕಿರಲು
ಎನ್ನವನೆ ತೆರೆ ಕದವನೆಂದು ನುಡಿಯುದರಿಂದ
ಮುನ್ನವೇ ಘಣಘಣನೆ ತೆರೆಯೆ ಚಚ್ಚರದಿಂದ
ತೆರೆಯೆ ಬಂದೊಳಪೊಕ್ಕು ಒರ್ಬನಿರ್ದೈ ತಂದೆ,
ಎನುತೆ ಪಾದುಕ ಪದದಿ ಪೂಜೆಯಂ ಪರಿಹರಿಸಿ,
ಅನುನಯದಿ ಮೊಗದಗ್ಗವಣಿಯೆರೆದು ಸಡಗರಿಸಿ,
ಮುಡಿಯೊಳಿರ್ದಲರಿನೊಯ್ಯನೆ ಪೂಜೆಯಂ ಮಾಡಿ,
ಕಡುನೇಹದಿಂದೆ ಪಸಿದೈ ಪಸಿದೆ ಎನೆ ನೋಡಿ,
ನೇಹದೋಗರಮುಮಂ ತಂದಲ್ಲಿ ಮುಂದಿರಿಸಿ,
ಓ ಹೋ ಹೊ ಹೊತ್ತು ಹೋಯಿತ್ತೆನುತಲಾದರಿಸಿ,
ಎನ್ನವನೆ ಎನ್ನವನೆ ಪಸಿದೆಯ್ಯ ಪಸಿದೆಯ್ಯ;
ಎನ್ನವನೆ ಚೆನ್ನವನೆ ಹೊತ್ತು ಹೋದುದೆ ಅಯ್ಯ.
ಉಣ್ಣವನೆಯುಣ್ಣವನೆಯೆನ್ನವನೆಯೆನ್ನಯ್ಯ
ಬಣ್ಣಿಸುತ ಬಣ್ಣಿಸುತ ಉಣ್ಣವನೆ ದಮ್ಮಯ್ಯ.
ಅರಿದೆನರಿದೆಂ ನಾಚಿ ಇರ್ದಪೆಯು ನೀನೆಂದು
ಅರಿದಂತೆ ಹಿಂದುಮುಂದಾಗಿ ನೋಡುವೆನೆಂದು
ಇರಲೀಶನೆಂದಿನಂದದಲುಂಡ ಮಾಳ್ಕೆಯಿಂ
ಪರಿಹರಿಸಿ ಭೂತಕ್ಕೆ ಕೊಟ್ಟನೊಲ್ದಳ್ತಿಯಿಂ.

ಆರೋಗಿಸಲ್ತಿರುಗಿ ನೋಡೆ ಹರುಷಂದಳೆದು
ಹಾರಯಿಸಿ ದಳವೇರಿ ತೆರೆಯನತ್ತತ್ತೆಳೆದು
ದಿಟ್ಟಿಯಾದಪುದೆಂದು ನೋಡಿ ಥೂ ಥೂ ಎಂದು
ಕಟ್ಟೆಳ್ಕರಿಂದೆ ನೇಹದ ಕಾಹನಿಟ್ಟಂದು
ಒಡೆಯನಂ ನೋಡುತಂ ಭುಜವನಪ್ಪಳಿಗೊಂಡು
ಕಡುಮೋಹವೆತ್ತಿಕ್ಕಿಯಾಡಲ್ಮನಂಗೊಂಡು.

ಇಂತು ಬೆಳಗಪ್ಪನ್ನೆಗಂ ಜಾಗರಂ ಮಾಡಿ
ಕಂತುಮದಹರನ ಕಡು ಮೋಹದೊಳಗೋಲಾಡಿ
ನಡೆತಂದು ಶಂಕರನನಪುರ್ಪ್ಪಿ ಕೊಂಡಾಡಿ
ಒಡೆಯನೇ, ಬೇಂಟೆಯಾಡಲ್ಪೋಪೆನೆಂದಾಡಿ

ನಿನ್ನಿನಂತಲ್ಲ ತಳುವೆಂ ತಳುವೆನೆನ್ನವನೆ,
ನಿನ್ನ ಮೇಲಾಣೆ ಬೇಗದಿ ಬರ್ಪೆನೆನ್ನವನೆ.
ಪೋದನೆಂತಕ್ಕೆ ಬೇಂಟೆಗೆ ತಾನೆ ಕಣ್ಣಂದ
ಸಾದರಂ ಮಿಗೆ ಪೋದನತ್ತಲಾ ಕಣ್ಣಂದ.

ಇತ್ತಲಾ ಕಣ್ಣಂದನೊಲ್ದು ಬೇಂಟೆಯನಾಡಿ
ಬರುತಿರ್ದನುರವಣಿಸಿ ತನ್ನ ಮನ ಭಯವೆತ್ತೆ
ಚಿಂತಿಸುತೆ ದೂರಿಸುತೆ ಎಂತಿರ್ಪನೋ ಎನುತೆ
ಅಂತಸ್ಥದೊಳು ಬೆದಬೆದರಿ ಬೇವುತುಂ ಬರುತೆ

ಬರೆ ಮುಂದೆ ಶಿವಲಿಂಗದೊಂದು ಕಣ್ಣೊಡೆದಿರಲ್
ಪರಿದಿಳಿವ ನೆತ್ತರೋರಂತೆಯೊಸರುತ್ತಿರಲ್
ಕಂಡು ಕಣ್ಗೆಟ್ಟು ಬಾಯ್ಬಿಟ್ಟು ಕಲ್ಮರನಾಗಿ
ಕಂಡು ಮುಂಗೆಟ್ಟು ಮತಿಗೆಟ್ಟು ಬಾಳ್ವೆಣನಾಗಿ

ಕೆಟ್ಟೆ ನಾಂ, ಕೆಟ್ಟೆ ನಾಂ, ಬೆಂದೆ ನಾಂ, ಬೆಂದೆ ನಾಂ.
ದಿಟ್ಟಯಿಂತೇಕಾಯ್ತು? ನೊಂದೆ ನಾನರಿದೆ ನಾಂ.
ಎನ್ನೊಡೆಯನೇಂ ಸೈರಿಸಲಾರ್ಪನೇಯಿದಕೆ
ಮುನ್ನವೇ ಮಂದುದೋರಿತ್ತು ಪಾಪಿಯ ಮನಕೆ.
ಎನ್ನಯ್ಯ ಏನಾದುದೆನಗೆ ಹೇಳೈ ತಂದೆ,
ಎನ್ನಯ್ಯ ಕಣ್ಣ ವೇದನೆ ಪಿರಿದಲಾ ತಂದೆ,
ಮೃಗವೊರಿಸಿಕೊಳಲೊತ್ತಿ ಕೋಡವೊನೆ ನೆಟ್ಟಿತೋ?
ಆಗಲ್ದ ಪಾಪಿಯನೆನ್ನನಿಂತಿರಿದು ಸುಟ್ಟದೋ?
ಎಂದುಟ್ಟ ಸೀರೆಯಿಂದೂದುತ್ತೆಯೊತ್ತುತ್ತೆ
ಕೆಂದಳಿರ್ಗಳಿಂದೊತ್ತಿ ನೋಡುತ್ತೆ ಬಾಡುತ್ತೆ

ಹಾ ಕಂಡೆನೊಂದುಪಾಯುವನರಿದೆನಿದಕೆಂದು
ಈ ಕಣ್ಗೆ ಎನ್ನ ಕಣ್ಣೆತ್ತು ನೋಡುವೆನೆಂದು
ಬೋಳೆಯಂಬಂ ತೆಗೆದು ಮನದಂದು ಶಂಕಿಸದೆ
ಕಾಳತ್ತಿಯರಸನೇ ನೋಡೆಂದು ಚಿಂತಿಸದೆ
ಶಂಕಿಸದೆ ಹೆದ್ದಯಿಸದರವರಿಸದೊಳಗೊತ್ತಿ.
ಭೋಂಕೆನಲ್ಮಿಂಟಿಯೊಡೆದಿರ್ದ ಕಣ್ಣೊಳಗೊತ್ತಿ

ನೋಡೆ, ತೊಳತೊಳಗಿ ಥಳಥಳಸಿ ಬೆಳಬೆಳಗುತಿರೆ
ನೋಡಿ ಕಣ್ಣಿಂದನಾನಂದಮಯನಾಗುತಿರೆ,
ತೊಟ್ಟನಾ ಲಿಂಗದೊಳ್ಮತ್ತೊಂದು ಕಣ್ಣೊಸರೆ
ಕಟ್ಟಾಳ್ನಿರೀಕ್ಷಿಸುತೆ ಕಲಿಯಾಗಿ ತಾನರರೆ
ಇನ್ನಂಜೆನಿನ್ನಂಜೆನಿನ್ನೊಂದು ಕಣ್ಣುಂಟು,
ಎನ್ನವನೆ ಎನ್ನವನೆ ಬಳಿಕ ನೀನೆನಗುಂಟು.
ಎಂದೆನುತೆ ಸದ್ಭಕ್ತಿಕುಶಲನಾನಂದದಿಂ
ಇಂದುಶೇಖರನೊಡೆದ ಕಣ್ಣೋಯದಂದದಿಂ
ಉಂಗುಟದೊಳೊತ್ತಿ ಕಣ್ಗುರುಹ ಮಾಡುತ್ತಲ್ಲಿ
ಮುಂಗುಡಿಸಿ ತನ್ನ ಮತ್ತೊಂದು ಕಣ್ಬಗೆದಲ್ಲಿ
ಗಣಪದವಿಯಂ ಬಯಸಿಯೊಲ್ದು ಕಣ್ಣಿಡುವಂತೆ
ತ್ರಿಣಯನಂ ಭಕ್ತಿಯಿಂ ಕಣ್ದೆರೆದು ನೋಳ್ಪಂತೆ
ತಂದುಂಗುಟದ ಕುರುಹಿನಿಂದಲ್ಲಿ ಕಣ್ಗೊಳಿಸಿ
ಇಂದುಧರನಿನ್ನಿರಲ್ಬಾರದೆನುತಂಕುರಿಸಿ
ಶಿವಲಿಂಗದಿಂ ಶಿವನ ಹಸ್ತಮುದ್ಭವಿಸುತ್ತೆ
ಶಿವನಲ್ಲಿ ಕಣ್ಣಪ್ಪನೆಸೆದ ಕೈವಿಡಿದೆತ್ತೆ.

# ಸರ್ವಜ್ಞನ ವಚನಗಳು.

## ದೇಶಪದ್ಧತಿ.

### ಮೂಡಲು

ಬಟ್ಟಿಬಟ್ಟೆಯೊಳಿಲ್ಲ ಹೊಟ್ಟೆ ಜಾಲಿಯ ಮುಳ್ಳು ।
ಹುಟ್ಟಿದವರೆಲ್ಲ ಗಿಜವಾಯಿ ಮೂಡಲ।
ಬಟ್ಟೆ ಬೇಡೆಂದ ಸರ್ವಜ್ಞ ॥ ೧ ॥

ಅಗ್ಗ ಸುಗ್ಗಿಗಳುಂಟು ಡೊಗ್ಗೆ ಮಜ್ಜಿಗೆಯುಂಟು ।
ಹೆಗ್ಗುಳದ ಕಾಯಿ ಮೆಲಲುಂಟು ಮೂಡನಾ।
ಡೆಗ್ಗೆನ್ನಬಹುದೆ ಸರ್ವಜ್ಞ ॥ ೨ ॥

### ಬಡಗಲು

ಎಲ್ಲಿ ನೋಡಿದರಲ್ಲಿ ಟೊಳ್ಳು ಜಾಲಿಯ ಮುಳ್ಳು ।
ಉಳ್ಳವರೆಲ್ಲ ಕಿಸಬಾಯಿ ಬಡಗಲ।
ತಳ್ಳಿ ಬೇಡೆಂದ ಸರ್ವಜ್ಞ ॥ ೩ ॥

ಊರು ಸನಿಹದಲಿಲ್ಲ ನೀರೊಂದು ಗಾವುದವು ।
ಸೇರಿ ನಿಲ್ಲುವರೆ ನೆರಳಿಲ್ಲ ಬಡಗಲಾ ।
ದಾರಿ ಬೇಡೆಂದ ಸರ್ವಜ್ಞ ॥ ೪ ॥

### ತೆಂಕಲು

ಶಂಖ ಹುಟ್ಟಿದ ನಾಡು ಬಿಂಕವನು ಏನೆಂಬೆ।
ಶಂಕರನ ಪೂಜೆ ಮನೆಮನೆಗೆ ಮಿಗಿಲಾಗಿ ।
ತೆಂಕಲುಂಟೆಂಬ ಸರ್ವಜ್ಞ ॥ ೫ ॥

ರಾಗವೇ ಮೂಡಲು, ಯೋಗವೇ ಬಡಗಲು ।
ರೋಗವೇ ಶುದ್ಧ ಪಡುವಲು ತೆಂಕಲು ।
ಭೋಗದಾ ಬೀಡು ಸರ್ವಜ್ಞ ॥ ೬ ॥

ಅಟ್ಟೆಂಬುದು ಮೂಡಲು, ಸುಟ್ಟೆಂಬುದು ಬಡಗಲು।
ತಟ್ಟೆಲುಂಬುದು ಪಡುವಲು ತೆಂಕಲು।
ಮುಷ್ಟಿಲುಂಬುವದು ಸರ್ವಜ್ಞ ॥ ೭ ॥

ಉಡಹೀನ ಮೂಡಲು ನುಡಿಹೀನ ಬಡಗಲು।
ಕಡು ಕೋಪದವರು ಪಡುವಲು ತೆಂಕಲು।
ಸಡಗರದವರು ಸರ್ವಜ್ಞ ॥ ೮ ॥

ಅರದೆಲೆಯು ಮೂಡಲೂ ಹೊರೆದಲೆಯು ಬಡಗಲೂ।
ಸರಿದಲೆಯುದ್ದ ಪಡುವಲು ತೆಂಕಲು।
ಬರಿದಲೆಯವರು ಸರ್ವಜ್ಞ ॥ ೯ ॥

## ಬೆಳವಲು

ಜೋಳದಾ ಬೋನಕ್ಕೆ ಬೇಳೆಯ ತೊಗೆಯಾಗಿ।
ಕಾಳೆಮ್ಮೆ ಕರೆದ ಹೈನಾಗಿ ಬೆಳವಲ।
ಮೇಳ ನೋಡೆಂದ ಸರ್ವಜ್ಞ ॥ ೧೦ ॥

ನವಣೆಯಾ ಬೋನಕ್ಕೆ ಹವಣುಳ್ಳ ತೊಗೆಯಾಗಿ।
ಕವಣೆಗಲ್ಲಷ್ಟು ಬೆಣ್ಣ್ಯದರೂಟದ।
ಹವಣ ನೋಡೆಂದ ಸರ್ವಜ್ಞ ॥ ೧೧ ॥

ಕಣುಗದಾ ಕಡುಬಾಗಿ ಮಣಕೆಮ್ಮೆ ಹೈನಾಗಿ।
ಕುಣಿಕುಣಿದು ಕಡೆವ ಸತಿಯಾಗಿ ಬೆಳವಲ-।
ದಣಕ ನೋಡೆಂದ ಸರ್ವಜ್ಞ ॥ ೧೨ ॥

ಕಡಲೆಯನು ಗೋದಿಯನು ಮಡಿಕುದ್ದು ಬೆಳೆದರೂ।
ಸುಡಬೇಕು ನಾಡನೆಂದವನ ಬಾಯೊಳಗೆ।
ಪುಡಿಗಡಬು ಬೀಳ್ಗು ಸರ್ವಜ್ಞ ॥ ೧೩ ॥

## ಮಲೆನಾಡು

ಕಾಡೆಲ್ಲ ಕಸುಗಾಯಿ ನಾಡೆಲ್ಲ ಹೆಗ್ಗಿಡವು।
ಆಡಿದ ಮಾತು ನಿಜವಿಲ್ಲ ಮಲೆನಾಡ।
ಕಾಡು ಸಾಕೆಂದ ಸರ್ವಜ್ಞ ॥ ೧೪ ॥

ಸೀತ ಧಾತುಗಳುಂಟು ಬಾತಿಹವು ಕುಕ್ಷಿಗಳು।
ಪಾತಕರು ಮರದಿ ತಿರಿದುಂಬ ನಾಡಿಗೆ।
ಯಾತಕ್ಕೆ ಬಹರು ಸರ್ವಜ್ಞ ॥೧೫॥

ಅಲ್ಲವರುಷಣವುಂಟು, ಬೆಲ್ಲ ಬಿಳಿ ಎಲೆಯುಂಟು।
ಒಳ್ಳೆ ಹಲಸುಂಟು, ಮೆಲ್ಲಲ್ಕೆ ಮಲೆನಾಡ-।
ನಲ್ಲೆನ್ನಬಹುದೆ ಸರ್ವಜ್ಞ ॥೧೬॥

ಕಿಚ್ಚುಂಟು ಕೆಸರುಂಟು ಬೆಚ್ಚನಾ ಮನೆಯುಂಟು।
ಇಚ್ಚೆಗೆ ಇರುವ ಸತಿಯುಂಟು ಮಲೆನಾಡ।
ಮೆಚ್ಚು ನೋಡೆಂದ ಸರ್ವಜ್ಞ ॥೧೬॥

---

# ವೃಷಭೇಂದ್ರ ವಿಜಯ.

## ಕೋಳೂರು ಕೊಡಗೂಸಿನ ಕಥೆ.

**ಮತ್ತೇಭ॥**
ವಿಳಸದ್ವಾಪ್ಯ-ವನೋಪವನ್ಯ-ಪರಿಖಾ-ಪೂರ್ಣಾಂಬುಜಾತಾಂಬುಜೋ।
ತ್ಪಳ-ಕಲ್ಹಾರ-ಸುಗಂಧಿ, ಚುಂಬಿತ-ನಭಶ್ಚಂದ್ರಾಶ್ಮಸಾಲಂ, ಸಮು ॥
ಜ್ವಳ-ರತ್ನಾಲಯ-ಹರ್ಮ್ಯ-ಮಂಟಪ-ಶಿವಾಗಾರಾಮಿತಶ್ರೀಯುತಂ।
ಕಳೆವೆತ್ತಗ್ಗಳವಾಗಿ ರಂಜಿಪುದು ಕೋಳೂರೆಂಬ ಸತ್ಪಟ್ಟಣಂ ॥೧॥

**ಕಂದ॥** ಆ ಪಟ್ಟಣದೊಳಗಿರ್ಪಂ।
ಗೋಪಧ್ವಜಪಾದಪೂಜಕಂ ಮೃದು ಮಧುರಾ- ॥
ಳಾಪಂ ಸದ್ಗುಣ-ನಿವಹ-ಕ-।
ಳಾಪಂ ಶಿವದೇವನೆಂಬ ಭಕ್ತನದೊರ್ವಂ ॥೨॥

ಅವನ ತನುಜಾತೆ ಸುಂದರಿ।
ಕುವಲಯ-ದಳ-ನಯನೆ, ಕೋಮಲಾಂಗಿ, ಸುಧಾ-ಮಾ ॥
ರ್ದವ ವಿನಯವಾಣಿ, ಮೃದುಹಸಿ।
ತೆ, ವನೇರುಹ-ವದನೆ, ಕನ್ನೆ-ಕಣ್ಗೊಳಿಸಿರ್ಪಳ್ ॥೩॥

**ವಚನ॥** ಆ ಶಿವದೇವನೊಂದು ದಿನಂ ದೇವಕಾರ್ಯನಿಮಿತ್ತಂ ಗೃಹಿಣಿವೆರಸು ನೆರೆಯೂರ್ಗೆ ತೆರಳಲುಜ್ಜುಗಿಸಿ, ತನೂಜೆಯಂ ಕರೆದು, ಮೆಯ್ದಡವಿ, ಗಲ್ಲಂಬಿಡಿದು, ಮುದ್ದಿಸಿ, ನಿಡುನೇಹದಿಂ ನಿರೀಕ್ಷಿಸಿ, ಮನೆಗಾಪಿರಿಸಲೆಂದಿಂತೆಂದಂ:—

**ಚಂಪಕ॥**
ಮಗಳೆ! ಮನೋಜ್ಞ-ಮೂರ್ತೆ! ಮರೆದೊರ್ಮೆಯುಮಾಡದಿರಕ್ಕ ಮಕ್ಕಳೊಳ್।
ಪುಗದಿರು ಪಿತೃಲೋವರಿಯನ್ನೊರ್ವಳೆ ಪೋಗದಿರೆತ್ತಲುಂ ಮನಂ ॥
ಬುಗುವ ದುಕೂಲಮಂ ಮಿಸುನಿ-ಬೊಂಬೆಯನೊಪ್ಪುವ ಭೂಷಣಂಗಳಂ।
ಬಗೆಮಿಗೆ ತಂದು ನಾಳೆ ನಿನಗಿತ್ತಪೆ ನಾಂ ಮನೆಗಾದಿರೊಪ್ಪದಿಂ ॥೪॥

**ಕಂದ॥** ಶಿವನಿಳಯಕ್ಕೈದಿ ತನೂ।
ಭವೆ ನೀಂ ಪ್ರಸ್ಥೈಕಮಿತದ ಕಪಿಲೆಯ ಪಾಲಂ॥
ಶಿವಲಿಂಗಕೆ ಪೊಳ್ತರಿದೊ-।
ಪ್ಪುವ ತೆರದಿಂ ಸಲಿಸಿ ಸಲಿಪುದೆನ್ನೀ ವ್ರತಮಂ ॥೫॥

**ವಚನ॥** ಎಂದು ಮಗಳ್ಗೆ ಬುದ್ಧಿವೇಳ್ದು ನಿಜರಮಣಿವೆರಸು ಜೇರೂರ್ಗವಂ ಪೋದಾಗಳ್ ಪರಿಮಳೋದಕದಿಂ ಜಳಕಂಬೊಕ್ಕು ದಣಿಂಬಮನುಟ್ಟು ನೊಸಲೊಳ್ ಭಸಿತಮಂ ತಳೆದು ಸಿಂಗರಿಸುತುಂ ಶಿವನಿಯಮಿತ-ಕಪಿಲಾ-ಕ್ಷೀರಮಂ ಕಮ್ಮನಿನಿದಪ್ಪಂತೆ ಕಾಯ್ಸಿ, ಬಳ್ಳದಿನಳೆದು ಪೊಯ್ದು ಪೊಂಬಟ್ಟಲ್ದೀವಿ ಧವಳವಸ್ತ್ರಮನಿರ್ಮಡಿಕೆಯಿಂ ಮುಸುಂಕಿ, ಸಡಗರದಿನೇಳ್ತಂದು ಶಿವಾಲಯಮಂ ಪೊಕ್ಕು ಕಲ್ಲಿನಾಥನಂ ಕಂಡೆರಗಿ, ಮುಂದೆ ಪಾಲ್ಬಟ್ಟಲನಿಟ್ಟು, ದೇವ! ಪಸಿದೆ, ಪಾಲ್ಗುಡಿವುದೆಂದುಸಿರ್ದು, ಕೊಡಗೂಸು ಕಂಬಮಂ ಮರೆಗೊಂಡು ನಿಂದಿರ್ದನಿಸಾನುಂ ಬೇಗದಿಂ ಮಗುಳ್ದು ನೋಳ್ಪಿನಮಾ ಪಾಲ್ಬಟ್ಟಲಿರ್ದಂತಿರೆ, ಪೆಳರ್ದು ಮನಂ ನೊಂದು ಮರುಗಿ,

**ಕಂದ॥** ದಡದಡಿಪೆರ್ದೆ ಬಿಸಿಮುಸಗುವ।
ನಿಡುಸುಯ್ಯ್ ಕಂಪಿಪ ಕರಂಗಳಿಪೊರ್ಡಿದ ಬಾಯ್ ॥
ಗುಡುಗುಡನೆ ಸುರಿವ ಕಣ್ಬನಿ-।
ಯೊಡನಿರೆ ಕೊಡಗೂಸು ನೋಡಿ ಲಿಂಗಮನಾಗಳ್ ॥೬॥

ಏಂ ಕಾರಣಮೀ ಪಾಲಂ।
ನೀಂ ಕುಡಿಯದೆ ಸುಮ್ಮನಿರ್ಪೆ ಯಕಟಕಟಿನಗಾ-॥
ತಂಕಮನಾಗಿಪುದುಚಿತಮೆ।
ಶಂಕರ! ನೀಂ ಪೇಳ್ವುದೆಂದು ಮಗುಳ್ದಿಂತೆಂದಳ್ ॥೭॥

**ಮತ್ತೆಭ॥**
ಪಸಿವೇನಾಗದೊ ದೇವ ಕೇಳ್ ನಿನಗೆ ಪಾಲೇಂ ಕಾಯದೋ ಸೊತ್ತಿತೋ।
ಬಿಸುಪಾರಿರ್ದುದೊ ಕಮ್ಮನಾಗದೊ ತನಿತ್ತಿಂಪೇರದೋ ಕಣ್ಗಂ॥
ಜಿಸದೋ ಮೇಣ್ ಪೊಗೆಸುತ್ತಿದತ್ತೊ ಪೆರರಿಂ ಕಣ್ಣಿಂಜಲಾದತ್ತೊ ಬಲ್।
ಬಿಸಿಯಾಗಿರ್ದುದೊ ಮೀಸಲೋಸರಿಸಿತೋ ಪೇಳಿಂತಿರ್ಪಂದಮಂ ॥೮॥

ಕಂದ॥ ಮನಮೊಳಸಿ ನೋಡಿದೆನ್ನೆನ
ಲ್ಗೆನೆಯಂ ಬೇರ್ಕೆಯ್ದು ತಂದೆನೇ ಪಾಲನಿದಂ ॥
ಮನೆಯಲ್ಲಿ ತಡಂಗೆಯ್ದೆನೆ ।
ನೆನೆವೆನೆ ಪೆರತೊಂದನೇಕೆ ಕುಡಿಯೆ? ಪುರಾರೀ ॥೯॥

ಬಿಸುಪಾರಿದೊಡೇಂ ಸವಿಸವು ।
ನಿಸುಗುವೆ ಬಗೆದಂದು ಜವದಿನೀಂಟಯ್ಯ ಸುಧಾ ॥
ರಸಮಂ ನೀಂ ಬಯಸಿದುದಂ ।
ಬೆಸಸೀಗಳೆ ಮನೆಗೆ ಪೋಗಿ ತಂದಪೆನಭವಾ ॥೧೦॥

ಪೊಸ ಸಕ್ಕರೆಯುಂ ನವಮಧು ।
ರಸಮಂ ನರುನೆಯ್ಯ ನೆಸೆವ ಕದಳಿಯ ಫಲಮಂ ॥
ರಸನೆಯೊಳಸಿದುದ ನೆನ್ನೊಳ್ ।
ಬೆಸಸೀಗಳೆ ನಿನಗೆ ತಂದಪೆಂ ಶಶಿಮೌಳೀ ॥೧೧॥

ಪುರಿಗಡುಬು ತರಗು ಚಕ್ಕುಲಿ ।
ಕರಂಜಿಗಾಯತಿರಸಂ ಚಿಗುಳಿ ಲಡ್ಡುಗೆ ಸ ॥
ಕ್ಕರೆ ಪೇಣಿಯೊಳವು ಮನ್ಮಂ ।
ದಿರದೊಳ್ ನೀಂ ಬಯಸೆ ಪೋಗಿ ತಂದಪೆನೀಗಳ್ ॥೧೨॥

ಪಾಲೊಡನಾರೋಗಿಪೆನೆನೆ ।
ಲೀಲೆಯೊಳಾಂ ಪೋಗಿ ತರ್ಪೆನೋಗರಮನಿಪಳ್ ॥
ಬಾಲಕಿ ಪುಸಿ ನುಡಿದಪಳೆಂ
ದಾಲೋಚಿಸದಿರ್ ಪರೀಕ್ಷಿಸೆನ್ನಯ ಗುಣಮಂ ॥೧೩॥

ಮಲ್ಲಿಕಾಮಾಲೆ॥
ಎನ್ನ ಮಾತನುಪೇಕ್ಷೆಗೆಯ್ಯದೆ ಪಾಲನೀಂಟಿದೊಡಯ್ಯ ಕೇಳ್ ।
ನಿನ್ನನಾಂ ಕರೆದೊಯ್ವೆನೊಪ್ಪುವ ವೀರಭದ್ರನ ತೇರ್ಗೆ ಸಂ ॥
ಪನ್ನ ಮದ್ದುರು ಪರ್ವಕೆನ್ನಿಯ ತಂದೆ ನಾಳೆನಗೀವ ರ
ತ್ನೋನ್ನತಾಭರಣಂಗಳಂ ನಿನಗೀವೆನಿಂದುಕಳಾಧರಾ ।೧೪॥

**ವಚನ॥** ಎಂದಡಿಗೆರಗಿ ಮರುಗಿ ಬಾಯಳಿದು ಪಲವಂಪದಿನೊಡಂ ಬಡಿಸಿದೊಡಂ ತುಟಿ ಮಿಡುಕದೆ ಸುಮ್ಮಿರಿರೆ ಮನಂ ನೊಂದು ತಲ್ಲಣಿಸಿ ಮಲ್ಲಳಿಗೊಂಡು,

**ಮತ್ತೇಭ॥**
ನುಡಿಯಂ ಪಾಲ್ಗುಡಿಯಂ ಮಹೇಶನಕಟೆನ್ನೇಗೆಯ್ವೆನೆಂದಳ್ತು ಬಾ।
ಯ್ವಿಡುತುಂ ಸುಗ್ಗನೆ ಸುಗಿಯುತುಂ ಜಿಳ್ಳಾಗುತುಂ ಬೆರ್ಚಿ ಸೈ॥
ಗೆಡೆಯುತ್ತುಂ ಜಿಡದೆದ್ದು ಡೆಂಡಣಿಸುತುಂ ಬಾಯಾರುತುಂ ಬಳ್ಕುತುಂ।
ಸೆಡೆಯುತ್ತುಂ ಕೊಡಗೂಸು ಕೋಟಲೆಗೆ ಪಕ್ಕಾಗಿರ್ದಳಾ ವೇಳೆಯೊಳ್ ॥೧೫॥

**ವಚನ॥** ಇಂತು ಪಿರಿದು ವಿಷಾದಂ ಬಡೆದು ಪಾಲ್ಗುಡಿಯದ ನಿನಗೆನ್ನ ಹರಣಮಂ ಸಮರ್ಪಿಪೆನೆಂದು ಮರಣೋದ್ಯುತೆಯಾಗಿ ಮುಂತಣ ಶಿಲಾಸ್ತಂಭಮಂ ಶಿರವೊಡ್ಡಿ ಘಳಿಲನೆ ಪಾಯಲೊಡನೆ,

**ಕಂದ॥** ನಂದನೆ ನೊಂದಪಳೆಂದೊ।
ಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿನವಳ್॥
ತಂದಣ್ಣೆವಾಲನೀಂಟಿದ।
ನಂದಂ ಮಿಗೆ ಭಕ್ತವತ್ಸಲಂ ಬಳಿಕಾಗಳ್ ॥೧೬॥

**ಚಂಪಕ॥**
ಎಳನಗೆಯುಣ್ಮೆ ಮುದ್ದುಮೊಗದೊಳ್ ಸುಧೆಯಿಂದಭಿಷೇಕಿಪಂತೆ ಕಣ್।
ಬೆಳಗಡದೊರ್ಪ್ಪೆ ಲಿಂಗತನುವಂ ಕೊಡಗೂಸು ಮನೋನುರಾಗಸಂ॥
ಮಿಳಿತ ವಿನೋದದಿಂ ಪಸುಳೆಯಾನೆನುತುಂ ಸುಧೆಯೂಂಟಲೊಲ್ಲದು।
ಮ್ಮಳಮನೊಡರ್ಚೆ ಕಾಡಿದೆ ಗಡೆಂದೆನೆ ನಕ್ಕನಹೀಂದ್ರಭೂಷಣಂ ॥೧೭॥

**ಕಂದ॥** ಜನಕಂ ಬಂದೊಡೆ ಪೇಳ್ದಪೆ।
ನಿನಿತೆಲ್ಲಮನಯ್ಯ ಮರೆಯದಿರ್ ಬಳಿಕೆನಗಂ॥
ನಿನಗಂ ಸಂವಾದಮದುಂ।
ಟೆನುತುಂ ಪೊಡಮಟ್ಟು ನಗುತೆ ಮನೆಗೇಳ್ತಂದಳ್ ॥೧೮॥

ಬಾಲೆಯ ನುಣ್ನುಡಿ ಬಟ್ಟಿಲ।
ಪಾಲಿಂದಿನಿದಾಗೆ ಕಿವಿಗೆ ಪಾಲ್ಗುಡಿಯದೆ ಮು।

ನ್ನಾ ಲಲನೆಯ ಮುಗ್ಧೋಕ್ತಿಯ ।
ನಾಲಿಸಿದೆಂ ಮುದದಿನೆಂದನುವೇಗೆ ಮಹೇಶಂ ॥೧೯॥

ಪಾಲಂ ತಂದನುದಿನಮಾ ।
ಬಾಲೆ ಪೊದಳ್ದಿಂಟಿ ಗಿರಿಶ ನೆರೆದೆಯ್ದುಗುಮಾ ॥
ತ್ಮಾಲಯಕೆ ಮುಗ್ಧಭಕ್ತಿ ಸ ।
ಮಾಲಂಬಿತ ಚಿತ್ತೆ ಮತ್ತಮಿಂತೊಂದು ದಿನಂ ॥೨೦॥

ಬೇರೂರ್ಗೆ ಪೋದ ಪಿತನಾ ।
ದಾರಿಯೊಳೆಯ್ತರುತೆ ಬರಿಯ ಬಟ್ಟಲ್ಪಿಡಿದಂ ॥
ದೂರಂತೆ ಬರ್ಪ ಸುತೆಯಂ ।
ದ್ವಾರ್ರಿಯೊಳೀಕ್ಷಿಸುತೆ ನಾಡೆ ಕೆರಳ್ದಿಂತೆಂದಂ ॥೨೧॥

ಎಲೆ ತರುವಲಿ ಬಟ್ಟಲಪಾಲ್ ।
ನೆಲಕೊಕ್ಕುದೊ, ನೀನೆ ಪೀರ್ದೆಯೋ ಪೇಳಿದನು ॥
ಕ್ಕಲಿಸದೊಡನಾಡಿಗಳ್ಗೇಂ ।
ನಲಿದೆರೆದೆಯೊ ಬರಿಯ ಬಟ್ಟಲಿದುಯಿದೆ ಕರದೊಳ್ ॥೨೨॥

**ವಚನ॥** ಎಂದಾಗ್ರಹಿಸಿ ಜನಕಂ ನುಡಿಯೆ ಬಿಗುರ್ತು ನಿಂದು,

**ಕಂದ॥** ನೀಂ ಬೆಸಸಿದಂತೆ ಬಟ್ಟ ।
ಲ್ದುಂಬಿ ಸುಧಾರಸಮನುಯ್ದು ಮುಂದಿಡೆ ಸವಿದಂ ॥
ತ್ರ್ಯಂಬಕನೆಲೆ ಜನಕ ಬಳಿ ।
ಕ್ಕಾಂ ಬರಿವಟ್ಟಲನೆ ಕೊಂಡು ಬಂದಪೆನೀಗಳ್ ॥೨೩॥

ಅನುದಿನಮಿಂತಾರೋಗಿಪ ।
ನಿನಿವಾಲಂ ಶೂಲಿ ನನ್ನಿ ತೊದಳಲ್ಲೆನೆ ತ ॥
ಜ್ಜನಕಂ ಪಾಲಂ ಶಿವನು ।
ಣ್ಬನೆ ಪುಸಿ ಪುಸಿಯೆಂದು ತನ್ನೊಳಿಂತೆಂದಂ ॥೨೪॥

ಅತಿವೃದ್ಧಭಕ್ತತತಿಸಂ ।
ತತಮುಂ ಪ್ರಾರ್ಥಿಸಿದೊಡುಣ್ಬುದದು ದುರ್ಲಭಮೀ ॥

ಸಿತಿಗಳನ್ನೇನುಮನರಿಯದ ।
ಮತಿರಹಿತೆಯ ಮಾತುಗೇಳ್ದು ಪಾಲ್ಗುಡಿದಪನೇ ॥೨೫॥

**ವಚನ**॥ ಎಂದು ಬಗೆಯುತ್ತುಂ ಶಿವಂಗಿವಳ್ ಪಾಲ್ಗುಡಿ ಪುದಂ ನಾಳೆ ನೋಳ್ಪೆನೆಂದು ನಿರ್ಧರಿಸಿ ಮಗಳ್ಗೂಡಿ ನಿಜ ಗೃಹ ಬೊಕ್ಕಿರ್ದು ಮರುದಿನದುದಯ ಕಾಲದೊಳೆಂದಿನಂತಳೆದ ಪಾಲಂ ಪೊ ಟ್ಟಲ್ದೀವಿ ತಳೆದ ನಂದನೆಯುಂ ಮುಂದಿಟ್ಟೀಕ್ಷ್ತೆಂದು ಶಿವದೇವಂ ಶಿವನಿ ರೊಳ್ ನಿಂದು ನಿರೀಕ್ಷಿಸುತ್ತಿರೆ ಕೊಡಗೂಸು ಮೃಡಂಗೆರಗಿ ಪಾಲ ಮುಂದಿಟ್ಟು ಕೆಯ್ ಮುಗಿದಾರೋಗಿಪುವೆಂದು ಬಿನ್ನಪಂ ಗೆಯ್ಯೆ,

**ಕಂದ**॥ ಹರನಾ ಭಕ್ತೆಯ ಮಹಿಮೆಯ ।
ಪರಿಯಂ ಧರೆಗರುಪಲೆಂದು ಪಾಲ್ಗುಡಿಯದೆ ಸೈ ॥
ತಿರೆ ಸುರ್ಕೆ ಸುಗಿದಳಾಗಳ್ ।
ತರಳೆ ಪಿತಂ ಕಂಡು ಕಾಯ್ದು ಸುತೆಗಿಂತೆಂದಂ ॥೨೬॥

ಕುಡಿಕುಡಿದು ನೀನೆ ಸುಧೆಯಂ ।
ಮೃಡನೀಂಟುಗುಮೆಂದು ನುಡಿದೆ ಪುಸಿಯಂ ನಿನ್ನಂ ॥
ಕಡಿದಿಕ್ಕದೆ ಮಾಣ್ಬೆನೆ ಕೇಳ್ ।
ಕಡುಪಾತಕಿಯೆಂದು ತಂದೆಯುರೆಯುಟ್ಟಲೊಡಂ ॥೨೭॥

**ಮಲ್ಲಿಕಾಮಾಲೆ**॥
ಹಾ ಮಹೇಶ್ವರ! ಹಾ ಮಹೀಶ್ವರ! ನೀನೆ ಸದ್ಗತಿ ಕಾಯ್ವುವೆಂ ।
ದಾ ಮಹಾ ಭಯ ಕಂಪಿತಾಂಗಿಯೊರಲ್ಚಿ ಬಾಯ್ಬಿಡೆ ಬೇಗದಿಂ ॥
ಸೋಮಶೇಖರನಂಜದಿರ್ ತನುಜಾತೆಯುಂಮಭಯಂಗುಡು ।
ತ್ತಾ ಮನೋಜ್ಞ ಸುಧಾರಸಂಗುಡಿದಂ ಕೃಪಾನಿಧಿ ಶಂಕರಂ ॥೨೮॥

**ಕಂದ**॥ ಆ ಕೊಡಗೂಸಂ ಕರುಣಾ ।
ಲೋಕವೆ ನಡೆನೋಡಿ ತೆಗೆದು ಬಿಗಿಯಪ್ಪುತೆ ಗೌ ॥
ರೀಕಾಂತಂ ತನ್ನೊಡಲೊಳ್ ।
ಜೋಕೆಯಿನೊಳಪುಗಿಸೆ ಪುಗುವ ಮಗಳಂ ಜನಕಂ ॥೨೯॥

ಕಂಡೆಲೆಲೆ ಪೊಗದಿರೆನುತುಂ ।
ಚಂಡಿಕೆವಿಡಿದೆಳೆಯೆ ಶಿಖೆಯೆ ಪೊರಗುಳಿದಿರೆ ಭೂ ॥
ಮಂಡಲಮಚ್ಚರಿವಡೆ ಮುಂ ।
ಕೊಂಡಾ ಕೊಡಗೂಸು ಲಿಂಗದೊಳಪೊಕ್ಕಿರ್ದಳ್ ॥೩೦॥

ಅಮರ್ದವಳ ಮುಗ್ಧ ಭಕ್ತಿಯೊ-।
ಳಮರ್ದಂ ತನಗಿತ್ತ ಮುಗ್ಧ ಭಕ್ತೆಗೆ ಸೊಗಯಿ ॥
ಪ್ಪಮರ್ದನ್ನೊಸೆದಿತ್ತನಘಹರ ।
ನಮರ್ದುಣಗಳ್ ಪೊಗಳೆ ನಲಿಯೆ ಶರಣ ಸಮೂಹಂ ॥೩೦॥

# ನೀತಿಮಂಜರಿ.

## ಕೀರ್ತಿ.

ಕಂದ॥ ದೀನರ್ಗೊಲವಿಂದೆಸಪುದು ।
ದಾನಮನರಿದರ ಪೊಗಳ್ತೆಗೆಡೆಯುಪ್ಪುದು ಪೇಣ್ ॥
ಮಾನವರ್ಗಿದರಿಂದಂ ಪೆರ-
ತೇನಿರ್ಪುದೊ ಕಾಣೆನಿಹದೊಳೊಂದುವ ಲಾಭಂ ॥೧॥

ಬಡವರ್ ಬೇಡುವ ಪುರುಳಂ ।
ಷಡಗರದಿಂದಿತ್ತು ಚಾಗಮಂ ಮೆರೆವವರೊಳ್ ॥
ತೊಡರ್ದಿರ್ಪೊರ್ಜಸಮನೆ ಕ-
ನ್ನಡಿಕುಂ ಕಬ್ಬಂಗಳೆಲ್ಲಮವನೀತಳದೊಳ್ ॥೨॥

ಪರೆದು ದಿಗಂತಂಬರಮುಂ ।
ಬರಮುಂ ಪುದಿದೆಣೆಗೆ ಬರ್ಪುದೊಂದಿಲ್ಲೆನಿಪೆ-॥
ತ್ತರದಿಂದಮೆಸೆವ ಜಸದಂ ।
ತಿರೆಪೋಲ್ ಸ್ಥಿರಮಾಗಿ ನಿಲ್ಪುದಾವುದೊ ತಿರೆಯೊಳ್ ॥೩॥

ತಿರೆಯೊಳಗಳಿಯದ ಜಸಮಂ ।
ತಿರಮಾಗಿರೆ ನಿರಿಸಿ ನೆಗಳ್ವ ಮಹಿಮೋನ್ನತರಂ ॥
ಸುರಲೋಕಕೆಯ್ದಿದವರಿಂ ।
ಪಿರಿಯರೆನುತ್ತೆಯ್ದೆ ಕೊಂಡು ಕೊನೆವರ್ ದಿವಿಜರ್ ॥೪॥

ಜಸದ ತನುವೆಸಕಮಂ ಪೆ ।
ರ್ಚಿಸುವೀ ಭೌತಿಕ ಶರೀರದೆಡರುಂ ಮತ್ತಾ ॥
ಜಸದೊಡಲ್ಗಂ ನೆಲೆಗೊಳಿಸೀ ।
ಕಸದೊಡಲಳಿವುಂ ಮಹಾಂತರಲ್ಲದರ್ಗುಂಟೇ ॥೫॥

ಪುಟ್ಟುವೊಡೆ ಮನುಜರಿಳೆಯೊಳ್ ।
ಪುಟ್ಟುಗೆ ವಿಖ್ಯಾತಿವಡೆವ ಗುಣದೊಡನವರಿಂ ॥

ದಿಟ್ಟಳವಾಗದರೇಕೆಯೊ ।
ಪುಟ್ಟಿದಪರ್ ಪುಟ್ಟದಿರ್ಪುದೊಳ್ಳಿತವಂದಿರ್ ॥೭॥

ತೆಗಳೆ ಪೆರರೇಕೆ ಮುಳಿವರೊ ।
ಪೊಗಳ್ತೆಗೆಡೆಯಪ್ಪ ತೆರದೆ ನೆಗಳದ ಮನುಜರ್ ॥
ತೆಗಳ್ಪರ್ಗೆ ಮುಳಿದು ಫಲಮೇಂ ।
ತೆಗಳ್ಕೆ ತವರ್ಗಾಗದಂತು ನೆಗಳಲ್ವೇಳ್ಕುಂ ॥೭॥

ಮನುಜಂ ವಸುಧಾತಳದೊಳ್ ।
ಜನಿಸಿದುದಕ್ಕಾವುದಾನುಮೊಂದರೊಳರಿದರ್ ॥
ಮನವೊಲ್ವಿನೆಗಂ ಖ್ಯಾತಿಯ ।
ನನುಗೊಳಿಸಲ್ವೇಳ್ಕುಮಿಲ್ಲದೊಡೆ ವಿತೆ ಜನನಂ ॥೮॥

ಸುಲಲಿತಗುಣರ ಪ್ಪೊಗಳ್ತೆಗೆ ।
ಪೊಲನಾಗದ ಮನುಜರೊಡಲ ಪೊರೆಯಂ ಪೊತ್ತಾ ॥
ನೆಲದೊಳ್ ಕಸಮಂ ಸೋದಿಸಿ ।
ಪಲಸೂಳ್ ಬಿತ್ತಿದೊಡವಾಗದೊಳ್ಪೆಳಸೆಂಬರ್ ॥೯॥

ಎಂದುಂ ಪೊಂದದ ಕೀರ್ತಿಯ ।
ನೊಂದಿದನೇ ಬಾಳ್ದನೆಂದು ಪೇಳಲ್ಪಡೆಗುಂ ॥
ನಿಂದೆಗೆ ಪಕ್ಕಾದವನಂ ।
ಪೊಂದಿದನೆನಲಕ್ಕುಮಾತನೊಳ್ ಪುರುಳುಂಟೇ ॥೧೦॥

---

## ನಿಜಹೇಳುವುದು.

ಕಂದ॥ ಪರಿಕಿಪೊಡೆ ಸತ್ಯಮೆಂಬುದು ।
ಪರರ್ಗೆ ಪುಚ್ಚಳಿಯನಾವ ತೆರದೊಳಮಿನಿಸುಂ ॥
ದೊರೆಕೊಳಿಸದ ವಚನಂಗಳ ।
ನೊರೆವುದೆ ಪೆರತೊಂದುಮಲ್ಲಮೆಂಬರ್ ತಿಳಿದರ್ ॥೧॥

ಪುಸಿಯಿಂದೆತ್ತಾನುಂ ಸಮ ।
ನಿಸುವೊಡೆ ನಿರ್ದೋಷಮಾದ ಹಿತಮನ್ಯರ್ಗಾ ॥

ಪುಸಿನುಡಿಯುಂ ಪರ್ಯಾಲೋ।
ಚಿಸಿ ನೋಳ್ಪೊಡೆ ದಿಟದ ತೆರನನೊಳಕೊಂಡಿರ್ಕುಂ ॥೨॥

ಹೃದಯಮರಿತಿರ್ಪುದಂ ಪುಸಿ।
ಯದಿರ್ಕೆ, ನರನಂತು ಪುಸಿದನಾದೊಡೆ ಬಳಿಕಂ॥
ಹೃದಯಮದು ಸಕ್ಷಿಯಾಗು।
ತ್ತೊದವಿಸಿ ಬೇವಸಮನಿರದೆ ಬೇಯಿಕುವಪನಂ ॥೩॥

ನುಡಿಯದೆ ಪುಸಿವಾತುಗಳಂ।
ನುಡಿಗಂ ಮಾನಸಕಮೆಂದುಮವಿಸಂವಾದಂ॥
ಗೆಡೆಗೊಳ್ವಂತುಟು ನೆಗಳ್ವರ್।
ಪಡೆವರ್ ಸಜ್ಜನರ ಮಾನಸಂಗಳೊಳಿಡೆಯಂ ॥೪॥

ಹೃದಯಕೆ ಪೊರ್ದುಗೆಯಪ್ಪಿನ॥
ಮದಂಭದಿಂ ದಿಟಮನೊರೆವ ಸನ್ನಿವೇಡಂಗರ್॥
ಪಡೆದು ತಪೋದಾನಂಗಳ।
ನೊದವಿಸಿ ಪೆಸರ್ವಡೆದರಿಂದಮುಗ್ಗಳಮೆನಿಪರ್ ॥೫॥

ಪುಸಿಯದುದರಂತೆವೋಲ್ ಮಾ।
ನಸರ್ಗಿಹದೊಳ್ ಜಸಕೆ ಕಾರಣಂ ಪೆರತಿಲ್ಲೊಂ॥
ದಿಸುಗುಮುವರ್ಗದುವೆ ಪರ।
ಕ್ಕೆ ಸಾರಸಾಧನಮೆನಿಪ್ಪ ಧರ್ಮಂಗಳುಮಂ ॥೬॥

ಎಡೆವಿಡದೊರ್ವಂ ಸಟೆಯಂ।
ನುಡಿಯಿಂ ತೊಲಗಿಸಿ ಯಥಾರ್ಥಮಂ ಪೇಳಲ್ಕಾ॥
ತೊರ್ಡವಂ ಮತ್ತಿನರಂಗಳ।
ನೊಡರಿಸದೊಡಮಾವ ತೆರದ ಹಾನಿಯುಮಿಲ್ಲಂ ॥೭॥

ಒದವುಗುಮೆಂತುಟು ಮಾನಸ।
ನ ದೇಹದೊಳ್ ನಿರ್ಮಲತ್ವಮುಂಬುವಿನಿಂದಂ॥
ಒದವಿದಪುದಂತುಟಾತನ।
ಹೃದಯದೊಳಮಲತೆ ಯಥಾರ್ಥವಾದಿತೆಯಿಂದಂ ॥೮॥

ಜಗದಿರುಳಂ ತವಿಸುವ ದೀ।
ವಿಗೆಗಳ್ ಪಲವುಂಟವರ್ಕೆ ದೀವಿಗೆವೆಸರೇಂ॥
ತಗುಗುಮೆ, ಬಗೆಯಿರುಳಂ ತೊ।
ಟ್ಟಗೆ ತವಿಸುವ ಸತ್ಯಮೆಂಬ ದೀಪಮೆ ದೀಪಂ ॥೯॥

ಜಗದೊಳ್ ಪ್ರಮಾಣಮೆನಿಸುವ।
ನಿಗಮಾಗಮಧರ್ಮಶಾಸ್ತ್ರನಯಶಾಸ್ತ್ರಂಗಳ್॥
ನಿಗದಿಸುಗುಂ ನಿಕ್ಕುವಮಂ।
ಮಿಗುವರಸಿನ್ನಿಲ್ಲಮೆನುತುಮೊಕ್ಕೊರಲಿಂದಂ ॥೧೦॥

# ಭರ್ತೃಹರಿಶತಕ.

ಕಂದ॥ ಬಲ್ಲಿದನ ವರ್ತನಂ ತಾಂ।
ಸೊಲ್ಲಿಸಲೆರಡಂಗವುಲ್ಲೆ ಸುಮ-ಗುಚ್ಛದವೊಲ್॥
ಎಲ್ಲರ ತಲೆಯೊಳ್ ಜೀರ್ಣಿಪು।
ದಲ್ಲದೊಡೆ ವನಾಂತರದಲ್ಲಿಯೇ ಜೀರ್ಣಿಸುಗುಂ ॥೧॥

ಚಂಪಕ॥
ಯತಿಜನ-ಸಂಗದಿಂ ನೃಪತಿ ದುರ್ನಯದಿಂದತಿ ಲಾಲನಂಗಳಿಂ।
ಸುತನನಪೇಕ್ಷೆಯಿಂ ಕೃಷಿಯು ಧರ್ಮನೇಳ್ಗೆ ಧನಂ ಪ್ರಮಾದದಿಂ॥
ಕುತನಯನಿಂ ಕುಲಂ ಮದಿರದಿಂ ಮತಿ ಶೀಲಮುನಾರ್ಯ ಸೇವೆಯಿಂ।
ಪ್ರತಿರಹಿತತ್ವದಿಂ ದ್ವಿಜನನಾದರದಿಂ ಕೆಳೆ ನಾಶವೈದುಗುಂ ॥೨॥

ಬಳಿಯಿರೆ ದಿಟ್ಟನೆಂಬರತಿ ದೂರದೊಳಿರ್ದೊಡೆ ಮುಗ್ಧನೆಂದಪರ್।
ಗಳಹುವನೆಂಬರುಕ್ತಿ ಪಟುವಂ ಸಲೆ ಸೈರಿಸೆ ಭೀರುವೆಂದಪರ್॥
ಖಳನಿವನೆಂದಪರ್ ಸಹಿಸದಿರ್ದೊಡೆ ಸೇವಕರಂ ಮಹೀವರರ್।
ತಿಳಿವೊಡೆ ಯೋಗಿಗಳ್ಗಮರಿದಪ್ಪುದು ಸೇವೆಯದೆಂಬುದುರ್ವಿಯೊಳ್ ॥೩॥

ಖಳರ ಸಖತ್ವಮೆಂಬುದು ಮೊದಲ್ ಪಿರಿದಾಗಿ ಬಳಿಕ್ಕೆ ಮುಂಬಗಲ್।
ನೆಳಲಿನ ಮಾಳ್ಕೆಯಿಂದೆ ಕಿರಿದಪ್ಪುದು ಭಾವಿಸೆ ಸಜ್ಜನರ್ಕಳಾ॥
ಕೆಳೆತನಮಾದಿಯಲ್ಲಿ ಕಿರಿದಾದೊಡಮೇಂ ಕ್ರಮದಿಂ ಮಹತ್ವಮುಂ।
ತಳೆವುದು ಪಿಂಬಗಲ್ ನೆಳಲಿನಂತೆ ಮೊಲಾವಗಮೀ ಧರಿತ್ರಿಯೊಳ್ ॥೪॥

ಕಂದ॥ ಕೆಡುಕರ್ ಕೆಡುಕುಗಳಂ ಗೈ।
ದೊಡಮಿನಿತುಂ ತೊರೆಯನಾತ್ಮ ಧೈರ್ಯವ ಧೀರಂ॥
ಬಿಡುವನೆ! ಅಧೋಮುಖಂ ಗೈ
ದೊಡಮೂರ್ಧ್ವಜ್ವಲನಮಂ ಹುತಾಶನನೆಂದುಂ ॥೫॥

ಪರಿಕಿಸೆ ಸುಶೀಲವುಳ್ಳಗೆ।
ಹರಿ ಹರಿಣಂ ಶರಧಿ ಕುಲ್ಯವನಲಂ ಸಲಿಲಂ॥
ಸುರಗಿರಿ ವೊರಡಿ ವಿಷಂ ಸುಧೆ।
ಯುರಗಂ ತಾಂ ಕುಸುಮವಾಲೆಯಪ್ಪುದು ಜಗದೊಳ್ ॥೬॥

**ಮತ್ತೇಭ॥**

ವಿನಯಂ ವಿದ್ಯೆಗೆ ಪೆರ್ಚಿದೈಸಿರಿಗೆ ಸಾಧುತ್ವಂ ಶಮಂ ಜ್ಞಾನಕಾ।
ರ್ಜನೆಗೈದರ್ಥಕೆ ಪಾತ್ರದಾನಮತಿ ಶೂರತ್ವಕ್ಕೆ ವಾಕ್ಸಂಯಮಂ॥
ಘನಮಾಗಿರ್ಪ ತಪಕ್ಕೆ ಶಾಂತತೆ ಸಹಿಷ್ಣುತ್ವಂ ಪ್ರಭುತ್ವಕ್ಕದೇ।
ನೆನೆ ನಿರ್ವ್ಯಾಜತೆ ಧರ್ಮಕೆಲ್ಲ ಜನರ್ಗಂ ಶೀಲಂ ಪರಂಭೂಷಣಂ ॥೭॥

# ರತ್ನಾಕರಾಧೀಶ್ವರಶತಕ.

## ಐಶ್ವರ್ಯ ಧಿಕ್ಕಾರ, ವೈರಾಗ್ಯ ವರ್ಣನೆ.

ಭೂನಾಥರ್ಕಳ ಬಾಳ್ಕೆ ಚಿತ್ತಕೆ ಸದಾ ತಳ್ಳಂಕವೆಷ್ಟೆಷ್ಟಧಾ- ।
ಶ್ರೀ-ನಾರೀ-ಧನ-ಸೇನೆ ಸಾರ್ದೊಡವುದುಂ ಸಾಲ್ದಪ್ಪುದೇ ಮತ್ತೆ ದುರ್- ॥
ದಾನಾಪೇಕ್ಷೆಯೆ ಪೆರ್ಚುಗುಂ ಬಗೆಯಲಂತಾ ಚಿಂತೆಯೇ ವ್ಯಾಧಿ ಸು- ।
ಜ್ಞಾನೈಶ್ವರ್ಯಕೆ ಸಾಟಿ ಸೌಖ್ಯಮೊಳವೇ ರತ್ನಾಕರಾಧೀಶ್ವರಾ ॥೧॥

ಪಡೆಯೊಳ್ಬಲ್ಲಿದನಾದೊಡಾ ಪಡೆಯಿನೇಂ ಪಾಪಾರಿಯಂ ಗೆಲ್ವನೇ ।
ಕಡುಪಿಂದಂ ಜವನಂ ತೆರಳ್ಚುವನೆ ಬಲ್ಪಿಂ ಮೋಕ್ಷಮಂ ಕೊಳ್ವನೇ ॥
ಕಡೆಗಾಭೂಪನ ಶಕ್ತಿ ನಾಲ್ಗಳಿಗೆ ಸಲ್ಗುಂ ಮರ್ತ್ಯ-ಕೀಟಂಗಳೊಳ್ ।
ಬಿಡು ಯೋಗೀಂದ್ರನ ಶಕ್ತಿಗಾವುದು ಸಮಂ ರತ್ನಾಕರಾಧೀಶ್ವರಾ ॥೨॥

ತಮ್ಮಂ ಕೀರ್ತಿಸೆ ನಲ್ಮೆಯೊಲ್ಮೆ ಕಡು ಚಾಗಂ ಕೂಡೆ ಸಂಭಾಷಣಂ ।
ನಿಮ್ಮಂ ಕೀರ್ತಿಸಲಡ್ಡಮೋರೆ ಬಡ-ಚಾಗಂ ಮೌನಮಾ ಭೂಮಿಪರ್ ॥
ತಮ್ಮಂ ಕೊಲ್ವ ನರೇಂದ್ರನಂ ಪೊಗಳಲಳ್ಕಿಂ ಮನ್ನಿಪರ್ ನಿಮ್ಮೊಳೇಂ ।
ಹಮ್ಮಂ ತೋರ್ಪರೊ ಕಾವನೊಳ್ ಕಲಹವೇ ರತ್ನಾಕರಾಧೀಶ್ವರಾ ॥೩॥

ವ್ರತಮಂ ಮಾಣ್ದೊಡೆ ಸೇವೆ ಮಾಣ್ಬುದರಿದೇ ಶೀಲೋಪವಾಸಕ್ಕೆ ಪೆ- ।
ರ್ಚುತಿರಲ್ ವಿಕ್ರಮ-ಲಕ್ಷ್ಮಿ ಜಾರ್ವುದರಿದೇ ಸತ್ಪಾತ್ರದಾನಂ ವಿವ- ॥
ರ್ಜಿತಮಾಗಲ್ ಸಿರಿಕುಂದಿವರ್ಪುದರಿದೇ ನಿಮ್ಮರ್ಚನಾಸಂಭ್ರಮಂ ॥
ಚ್ಯುತಮಾಗಲ್ ನೃಪ-ವೈಭವಂ ಸಡಿಲದೇ ರತ್ನಾಕರಾಧೀಶ್ವರಾ ॥೪॥

ಹೊರಮಿಂಚಿಂ ಹೊಲೆಮೆಣ್ಗೆ ಸೋಲ್ವ ತೆರದಿಂ ಶೃಂಗಾರವೀರಕ್ಕೆ ಬಾ- ।
ಯೊರೆತೀ-ತಸ್ಕರ-ಜಾರ-ವೀರ-ವಿಟ-ವೇಶ್ಯಾ-ಕಾವ್ಯಮಂ ಕೇಳ್ದು ಮೆಯ್ ॥
ಮರೆವರ್ ಪುಣ್ಯ-ಪುರಾಣದತ್ತೆಳಸರಯ್ಯೋ ಭೂಪರೊಲ್ಪಾವ್ಲಮಂ ।
ಸುರಿವರ್ ಪಾಲ್ಗುಡಿಯೆಂವರಂ ಜಡೆವರೈ ರತ್ನಾಕರಾಧೀಶ್ವರಾ ॥೫॥

ಭೃತ್ಯಂ ತನ್ನನದೆಂತು ಕಾಣ್ಬನವನಂತುರ್ವೀಶ್ವರರ್ ನಿಷ್ಕ ಕಂ- ।
ಡತ್ಯಾನಂದದೆ ಕಾಣ್ಕೆ ಕೈಮುಗಿತವಷ್ಟಾಂಗಾನತಂ ಸಮ್ಮುಖಂ ॥
ಸ್ತೌತ್ಯಂ ಸೇವೆಗಳೆಂಬಿವಂ ನೆಗಳುತುಂ ನಂಬಿರ್ದೊಡಾತಂಗೆ ತತ್- ।
ಪ್ರತ್ಯರ್ಥಿ-ಕ್ಷಿತ-ಪಾಲರೇನೆರಗರೇ ರತ್ನಾಕರಾಧೀಶ್ವರಾ ॥೬॥

ನರರೊಳ್ ಪುಟ್ಟಿ ನರೇಂದ್ರನಾದ ದಿನದೊಳ್ ಸದ್ಧರ್ಮವುಂ ಸನ್ಮುನೀ- ।
ಶ್ವರರಂ ಭವ್ಯರನೊಲ್ದು ಮನ್ನಿಸಿಯನಾಥರ್ಗಾಶ್ರಿತರ್ಗೀಯುತುಂ ॥
ಪರಿವಾರ-ಪ್ರಜೆಗಳ್ಗೆ ತಾಯ ತೆರದಿಂದೋವುತ್ತಮಿರ್ಪಂ ಧರಾ- ।
ವರನಿಂದಾ-ಬರ್ದಿಲಕ್ಕೆ ನಾಳಿಗೆ ವರಂ ರತ್ನಾಕರಾಧೀಶ್ವರಾ ॥೭॥

ರಾಜಶ್ರೀಯೊಳನೇಕ-ಕಾಮಿಸಿಯರುಂಟಾಳಾಪ-ನೃತ್ಯಂಗಳುಂ- ।
ಟಾ ಜಿಹ್ವಾ ರುಚಿಯುಂಟು ಕಾಮಿಸಿದುವೆಲ್ಲಾ ವುಂಟುವುಂಟಾದೊಡಾ ॥
ರಾಜೀವಂ ಕೆಸರಲ್ಲಿಯುಳ್ಳದವೊಲಿರ್ದೂರ್ಧ್ವಕ್ಕೆ ಕಣ್ಣಿಟ್ಟೊಡಾ ॥
ರಾಜಂ ರಾಜನೆ ತಾನೆ ರಾಜಋಷಿಯೈ ರತ್ನಾಕರಾಧೀಶ್ವರಾ ॥೮॥

ನೀನಾರೆಂಬರಿವಾಗೆ ಸಾಕು ಸಿರಿಯೇಂ ದಾರಿದ್ರ್ಯಮೇಂ ಗ್ರಾಮಮೇಂ ।
ತಾನೇಂ ಪಾಲುಣಿಸೇಂ ಕದನ್ನದುಣಿಸೇಂ ನಿರ್ಬಂಧಮೇಂ ರಾಜ್ಯಮೇಂ ॥
ಈ ನಾನಾವಿಧಿಯೆಲ್ಲವುಂ ಕನಸಿವಂ ಕೊಂಡೇನೊ ನಿನ್ನೆನ್ನ ಸಂ- ।
ಧಾನಂ ನಿತ್ಯಸುಖೈಕವಿನ್ನುಳಿದುದೇಂ ರತ್ನಾಕರಾಧೀಶ್ವರಾ ॥೯॥

# ಸೋಮೇಶ್ವರಶತಕ.

ತೊನೆಯಲ್ ತಾಳ್ಮೆಯನಾಂತವಂ ಜರೆತೊಡಂ ನಿರ್ಗರ್ವಿ ಕೊಟ್ಟಿ
ಡಲಾ ।
ತನೆ ಸತ್ಯವ್ರತಿ ಸೂರುಳಿಟ್ಟು ಪುಸಿಯಲ್ ಭಾಷಾಪರಿಪಾಲಕಂ ॥
ಕನಲ್ದುಂ ಸೈರಣೆವಂತನುದ್ಗುಣಯುತಂ ತಾಂ ನಿರ್ಗುಣಂ ದುಷ್ಕುಲಂ ।
ಧನಿಕಂ ಸತ್ಕುಲಜಾತನೈ ಹರಹರಾ ಶ್ರೀ ಚನ್ನ ಸೋಮೇಶ್ವರಾ ॥೧॥

ಅಣುಮಾತ್ರಂ ಕೊಸರಿಲ್ಲದಾಳ್ದನೆಡೆಯೊಳ್ ಲಂಚಕ್ಕೊಡಂಬ
ಟ್ಟುಮಾ ।
ಪಣಮಂ ಕೊಂಡತಿವಿತ್ತಮಂ ಕೆಡಿಸಿ ಪೈಶೂನ್ಯೋಕ್ತಿಯಿಂ ದ್ರೋಹಮಂ ॥
ಎಣಿಸುತ್ತಿಲ್ಲರ ಬಾಳ್ಗೆ ನೀರನೆರೆದಾರುಂ ಕಾಣದೇ ಭಕ್ಷಿಪಾ ।
ಗಣಕಂ ಹೆಗ್ಗಣಕಂ ಸಮಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೨॥

ಅರೆಯಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲದೇ ।
ಕಿರಿದಾಗಿರ್ದೊಡದೇನುಪಾಯಪರನೊರ್ವಂ ಕೋಟಿಗೀಡಕ್ಕಹೆ ॥
ಮ್ಮರನಿರ್ದೇನದರಿಂದಲೆತ್ತಬಹುದೇ ಬಲ್ಭಾರಮಂ ಸನ್ನೆಸಾ
ವಿರ ಕಾಲಾಳಿನ ಸತ್ವನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೩॥

ಇರಿಯಲ್ಬಲ್ಲೊಡೆ ವೀರನಾಗು ಧರೆಯೊಳ್ ನಾನಾ ಚಮತ್ಕಾರಮಂ ।
ಅರಿಯಲ್ಬಲ್ಲೊಡೆ ಮಂತ್ರಿಯಾಗು ವಿಭುವಾಗಾರೆಂದೊಡಂ ಕೋಪಮಂ ॥
ತೊರೆಯಲ್ಬಲ್ಲೊಡೆ ಯೋಗಿಯಪ್ಪುದರಿ ಷಡ್ವರ್ಗಂಗಳಂಗೆಲ್ವೊಡೇ ।
ತೆರಂಬಲ್ಲಪೊಣೆಯಪ್ಪುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೪॥

ಪೊರಬೇಡಂಗಡಿಸಾಲವೂರ ಹೊಣೆಯಂ ಪಾಪಂಗಳಂ ನಿಂದೆಯಂ ।
ಮಡೆ ಬೇಡಾತ್ಮಜ ಸತ್ಕಳತ್ರ ಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್ ।
ಸೆರೆ ಬೇಡರ್ಭಕ ಪಕ್ಷಿ ವೃದ್ಧ ತರುಣೀ ಗೋ ವಿಪ್ರ ದೀನರ್ಕಳಂ ।
ತೆರಬೇಡೊತ್ತಿಗೆ ಬಡ್ಡಿಯಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೫॥

ಸುರಚಾಪಾಯತವಿಂದ್ರ ಜಾಲದ ಬಲಂ ಮೇಘಂಗಳಾಕಾರ್ವ್ಯ ಬಾ।
ಲರು ಕಟ್ಟಾಡುವ ಕಟ್ಟೆ ಸ್ವಪ್ನದ ಧನಂ ನೀರ್ಗುಳ್ಳೆ ಗಾಳೀ ಸೊಡರ್॥
ಪರಿವೃತ್ತಿರ್ಪೆ ಮರೀಚಿಕಾಜಲ ಜಲಾವರ್ತಾಕ್ಷರಂ ತೋರುವೈ।
ಸಿರಿ ಪುಲ್ಲಗ್ರದ ತುಂತುರ್ವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೬॥

ಸುಚರಿತ್ರರ್ ಸಲೆ ಕೀರ್ತಿಗೋಸುಗ ಮಹಾಕಷ್ಟಂಗಳಂ ತಾಳಿ ಸಾ।
ರಿಚಯಕ್ಕಾದರದಿಂದ ಮಾನಗಳನಿತ್ತಾಚಂದ್ರತಾರಾರ್ಕವಾ॥
ದಚಲಖ್ಯಾತಿಯ ತಾಳ್ದರ್ರೀಗಲಿಳೆಯೊಳ್ ತಾವೀಯದೈ ಪೋಗಲಾ।
ವಚನಕ್ಕೇನು ದರಿದ್ರವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೭॥

ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೇ।
ಕಡು ಪಾಪಂ ಬಲುಮೀಯಲಾತ ಶುಚಿಯೇ ಕಾಕಾಳಿಯೇಂ ಮೀಯದೇ॥
ಗುಡಪಾನಂಗಳೊಳದ್ದೆ ಬೇವಿನ ಫಲಂ ಸ್ವಾದಪ್ಪುದೇ ಲೋಕದೊಳ್।
ಮಡಿಯೇ ನಿರ್ಮಲ ಚಿತ್ತವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥೮॥

---

# ಹದಿಬದೆಯ ಧರ್ಮ.

ಪೆಣ್ಣಪೆತ್ತವರ ಬಳಗ ಬಳೆವುದು ಬೇಗ। ಪೆಣ್ಣಪೆತ್ತವರು ಪೆರ್ಮೆವರು ॥
ಪೆಣ್ಣಪೆತ್ತವರಿಂದೆ ಪೆಸರೆಸಿಸಿತು ಮಿಗೆ। ಬಣ್ಣವೇರಿತು ಪಾಲ್ಗಡಲು ॥೧॥

ಪೆಣ್ಣಿಂದೆ ಪೆರ್ಮೆಗೊಂಡನು ಹಿಮವಂತನು। ಪೆಣ್ಣಿಂದೆ ಭೃಗು ಪೆರ್ಚಿದನು॥
ಪೆಣ್ಣಿಂದೆ ಜನಕರಾಯನು ಜಸವಡೆದನು। ಪೆಣ್ಣ ನಿಂದಿಸಲೇಕೆ ಪೆರರು ॥೨॥

ಸಿರಿರಾಣಿಯ ಸೀತೆಯ ರುಕ್ಮಿಣಿಯ ಶ್ರೀ। ಹರಿಯೊಡನೊಂದೆ ಹಂತಿಯೊಳು॥
ಇರಿಸಿ ಪೂಜೆಯನೊಡರಿಸುವರು ಪಿರಿಯರು। ಪರಿಕಿಪೊಡಿವರು ಪೆಣ್ಗಳೆ ॥೩॥

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ। ಪೆಣ್ಣಲ್ಲವೆ ಪೊರೆದವಳು ॥
ಪೆಣ್ಣ ಪೆಣ್ಣೆಂದೇತಕೆ ಬೀಳುಗಳೆವರು। ಕಣ್ಣ ಕಾಣದ ಗಾವಿಲರು? ॥೪॥

ಕುವರನಾದೊಡೆ ಬಂದ ಗುಣವೇನದರಿಂದೆ। ಕುವರಿಯಾದೊಡೆ ಕುಂದೇನು॥
ಇವರಿರ್ವರೊಳೇಳಿಗೆವಡೆದವರಿಂದ। ಸವನಿಪುದಿಹಪರಸೌಖ್ಯ ॥೫॥

ಕುಲಪುತ್ರನೋದಿ ತಿಳಿದು ನಡೆದಲ್ಲದೆ। ಕುಲವನುದ್ಧರಿಸಲರಿಯನು ॥
ಕುಲಪುತ್ರಿಯೊಳುಗುವರನಿಗಿತ್ತ ಮಾತ್ರಕೆ। ಕುಲಕೋಟಿಯನುದ್ಧರಿಪಳು॥೬

ಬಸಿರೊಳೊಗೆದು ಬಳೆದೇಕರೀತಿಯೊಳಿಲ್ಲ। ಸಿಸುಗಳಿರ್ದೊಡಮೇನು ಬಳಿಕ
ಒಸೆದಿತ್ತುದನೊಡಬಡುವಳು ಪೆಣ್ ಗಂಡು। ಪಸುಗೆಗೊಂಬನು ಬಲ್ಮೆ
ಯೊಳು ॥೭

ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ। ದಿಟ್ಟಗಂಡುಗಳಂತಿರಲಿ
ಕೊಟ್ಟುದರಿಂದೆ ತಣಿವ ಕುವರಿಗೆ ಮನ। ಮುಟ್ಟಿ ಕೊಡುವುದು ಕೋ
ವಿದರು ॥೮

ಎನ್ನ ಪೆತ್ತವರಿವರೀ ಮನೆಯೊಡವೆಗ। ೞನ್ನ ಸಂಬಂಧವಿಲ್ಲದಿರೆ ॥
ಕನ್ನೆಯನನ್ಯರಿಗೀವನ್ನೆಪರಮನೆ। ಮನ್ನಿಸೀವುದು ಮಮತೆಯೊಳು ॥೯

ಅರಿತು ನಿಟ್ಟಿಸಿ ಗಂಡುಮಕ್ಕಳಿಂದತಿಶಯ। ದಿರಕದೊಳಿಸಿವ ಪೆಣ್ಗಳನು ॥
ಪೊರನೋಟದಿಂದೆ ನೋಡದೆ ಪೋಷಿಸದೆ। ಪುರುಕವೆರಸಿ ಮನ್ನಿ
ಪುದು ॥೧೦॥

ಪದುಳಗೊಳಿಸಿ ಪಲವಗೆ ಪಸದನಗಳ। ಪುದುಗಿಸಿ ಪೊನ್ನೊಡಿಗೆಗಳ ॥
ಮದುವೆಗೆ ನೆರೆದ ಪೆಣ್ಮಕ್ಕಳನಿಟ್ಟಿಸ। ರಿದೆಗೊಳುವಂತೆಸಗುವುದು ॥೧೧॥

ಸುಗುಣನಾವನು ಸುಚರಿತ್ರನಾವನು ಕಣ್ಗೆ। ಸೊಗಸುವ ಸೊಬಗನಾರೆಂದು॥
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ। ಳೊಗೆದೊಳುಗುವರನಿ
ಗೊಲಿದು ॥೧೨॥

ಅಲಿಗೆಯ್ಯದವಮತಿಯೆಸಗದ ಪೈರವ। ಬಲಿಸದ ಬರಿದೆ ಪಳಿಯದ॥
ಕೊಲಿಪ್ಪಿಗಳಿಂದೆ ಕೋಟಲೆಗೊಳಿಸದ ಸ। ತ್ಕುಲಕೀವುದು ಕುವರಿಯನು॥೧೩॥

ತನ್ನ ಮನೆಯೊಳುಂಡು ತವರುಮನೆಯೆ ಸಂ। ಪನ್ನವಕ್ಕೆಂಬ ಪೆಣ್ಗಳಿಗೆ॥
ಪೊನ್ನ ತೊಡಿಗೆ ಪೊಸದುಗುಲಂಗಳನಿತ್ತು। ಮನ್ನಿಸುವುದು ಮನ
ವರಿತು ॥೧೪॥

ಒಡವರಾಪೆಮಗೆಲ್ಲಿ ಬಪ್ಪುದೊಡವೆಯೆಂದು। ಕಡುದೈನ್ಯಪಾಡಿ ಕಳೆಯದೆ॥
ಉಡದೆ ತೊಡದೆ ತಾವುಳಿದು ತನುಜೆಯರಿ। ಗುಡುತೊಡುವೊಡವೆಗೊ
ಡುವುದು ॥೧೫॥

ತನ್ನ ತವರುಮನೆಯುವರಿತ್ತ ಪಿತ್ರಳಿ। ಪೊನ್ನೆಂದು ಬಗೆದು ಪೊಗಳುವ॥
ಕನ್ನೆಯರೊಳು ಕಡುಗೂರ್ಮೆಯನೊಡರಿಸಿ। ಪೊನ್ನುರನ್ನದೊಳು
ಪೂಜುವುದು ॥೧೬॥

ಆದರಿಂದೆ ಪೆಣ್ಮಕ್ಕಳನಾದರಿಪುದು। ಮುದವೇರಿಪುದು ಪುದ್ದಿಪುದು॥
ಮದುವೆಮಂಗಲದೊಳು ಮನಪ್ರೊಲಿದವರಿಗೆಂ। ದೊದವಿಪುದುಚಿತವಸ್ತ್ರ
ವನು ॥೧೭॥

ಅಂದಂದಿಗೆ ನೆನನೆನೆದು ನೇಹದೊಳಿನ್ನ। ಕಂದನೆಂತಿರ್ಪಳೆಂದು॥
ಬಂದ ಬಂದವರ ಬಣ್ಣಿಸಿ ಕೇಳುವುದು ಮನ। ದಂದು ಮಾನಿಸರನಟ್ಟು
ವುದು ॥೧೮॥

ಬರಿಸುವುದೊಂದೂರೊಳಿರ್ಪಳನುಪಚಾರ । ಪೆರಸಿ ಪಾರಣೆಪರ್ವಗಳಿಗೆ ॥
ನೆರೆಯೂರೊಳು ಬಾಳುವ ನಿಜತನುಜೆಯ । ಕರೆಯಿಸುವುದು ಕಾಲ
ವರಿತು ॥೧೯

ತಂದೆಯ ಮನೆಯಿಂದೆ ತಂದೆನೀವಸ್ತುವ । ನೆಂದೇಳಿಗೆಗೊಳುವಂತೆ ॥
ಬಂದ ಬಂದಾಗ ಬರಿದೆ ಕಳುಪದೆ ಪೆಣ್ಣ । ಗೊಂದರಿಯೊಡವೆಗಾಡು
ವುದು ॥೨೦

ಅವಿವೇಕದೊಳು ತನ್ನಾಣ್ಮನ ನುಡಿಗೇಳ । ದವಮತಿಗಳನಾಚರಿಪ ॥
ಕುವರಿಗೆ ಸಲಿಗೆಯ ಕೊಟ್ಟು ಕೊಬ್ಬಿಪ ತವ + ರವರೈಸೆ ಪೆಣ್ಗಾಗದ
ವರು ॥೨೧

ಮುಳಿವ ಮೋಡಿಯೊಳಿರ್ಪ ಮೊನೆವಾತಾಡುವ । ಪಳಿವ ಪಲವು ಪಾ
ಡುಗಳಿಗೆ
ಅಳಲುವ ಮನವನಡಗಿಸಿಯಣುಗಿಗಾಗಿ । ಯಳಿಯನಿಗಳುಕಿ ನಡೆವುದು ॥೨

ಇನಿಯನೊಲಿದು ನಿನ್ನಿಚ್ಛೆಯರಿತು ಮಗೆ । ಸನುಮಾನಗೈದು ಸಂತರಿಸೆ
ಎನಗೊಳಗಾದನೆಂದೆಣಿಸಿ ಮೈಮರೆಯದೆ । ಯನುನಯದಿಂದನು-
ಸರಿಸು ॥೨೩

ಕುಲಕೆ ಪೊರಗು ಕೊಟ್ಟ ಪೆಣ್ಣೆಂಬುದನರಿ । ತೆಲೆಗೆ ನೀನೆಮ್ಮ ಬಯಸದೆ
ಅಲೆಗೆಯ್ವ ನಲ್ಲನೊಳ್ಡಕವಾಗಿರ್ದೆಮ್ಮ । ಕುಲದೇಳಿಗೆಯ ಕೊನರಿ
ಡಿಸು ॥೨೪

ಅತ್ತೆ ಮಾವಂದಿರಿಗಳುಕಿಯಕ್ಕರುಗೂಡಿ । ಚಿತ್ತವರಿತು ಸೇವೆಯೆಸಗು ॥
ಅತ್ತಿಗೆನಾದಿನಿಯರನನುವರ್ತಿಸು । ಪೆತ್ತವರನು ಪೆರ್ಮೆಗೊಳಿಸು ॥೨೫॥

ಮಗಳೆ ನಿನ್ನಿನಿಯನ ಮನೆಯುವರೆಮ್ಮೊಳು । ಪಗೆಸಾಧಿಸಿ ಪ್ರಿದೊಡದಕೆ
ಬಗೆಯೊಳು ತಾಳುಮೆಯನು ಬಲಿದವರೊಳು । ಮೊಗವಂಟಿಸಿ ನೋನ
ವೆಸಗು ॥

ಪೇರ್ಮೈಸಿರಿಯಿಂದ ಪಿಗ್ಗಿ ಬೆರತು ನಿನ್ನ। ಮೇರೆ ತಾರೆಯ ಮೀರದಿರು ॥
ಸೇರಿಯೂಳಿಗವೆಸಗುವ ಸೇವಕರನು। ಸೈರಣೆಗೊಂಡು ಸಂತರಿಸು ॥೨೭॥

ಎಂತು ನಡೆದೊಡಿನಿಯನಿಗಿಂಬುದೋರುವು। ದೆಂತು ನಡೆದೊಡೇಳ್ಗೆಯ
ಹುದು ॥
ಎಂತು ನಡೆದೊಡೆಲ್ಲರುಮಿದು ಲೇಸೆಂಬ। ರಂತಿರು ಸಂತೋಷದೊಳು ॥೨೮॥

ಕುವರಿಯನಿಂತು ಕೂರ್ಮೆಯೊಳು ಸಲಹಿ ಮು। ತ್ತವಳನಿತ್ತೊಳು
ಗುವರನಿಗೆ ॥
ಸವೆಯದ ಧರ್ಮವ ಸಂಪಾದಿಸಿ ಮಾ। ಧವನ ಮನವ ಬರಿಸುವುದು ॥೨೯॥

ಪಿಂತಣ ನಲ್ವೆಂಡಿರ ಪೆರ್ಮೆಗಳನೋ। ರಂತೆ ಬಣ್ಣಿಸಿ ಪೊಗಳುವುದು ॥
ಇಂತು ಪೆಣ್ಮಕ್ಕಳಿಗೆದೆಯೊಳು ನೆಲೆಗೊಳು। ವಂತೆ ಬುದ್ಧಿಯನು ಪೇಳು
ವುದು ॥೩೦॥

---

# ಶಾಸನಗಳಲ್ಲಿಯ ವರ್ಣನೆಗಳು.

———ooo0ooo———

## ತೊರಗಲೆದೇಶ.

**ಚಂಪಕ॥**

ನೆರೆದ ಕವುಂಗು ಬಗ್ಗಿಸುವ ಕೋಗಿಲೆ ತಳ್ತಿಲೆವಳ್ಳಿ ಸುತ್ತಲುಂ ॥
ತುರುಗಿ ತಳಿರ್ತ ಮಾಮರನಿಕಾಯಮುಗುರ್ವಿನ ಕರ್ವುದೋಂಟಮುಂ ॥
ತರಿಕೆಯ ಚಾರು ನಂದನವನಾವಳಿ ರಾಜಿಸೆ ಶೋಭೆವೆತ್ತುದೀ ।
ತೊರಗಲೆ ಭೂತನಾಥ ವಿಭುವಿಂ ಬಳಸಿರ್ಪ ಮಲಪ್ರಹಾರಿಯಿಂ ॥೧॥

## ಬರ್ಮಭೂಪಾಲ.

**ಮತ್ತೇಭ॥**

ಅರಿಭೂಪಾಳಕರೊಡ್ಡಿದಲ್ಲಿ ದಿಟದಿಂ ಪುಣ್ಯಾಂಗನಾನೀಕ ಸೌಂ।
ದರಮಂ ಕಂಡೆಡೆಯಲ್ಲಿ ವಂದಿನಿಕರಂ ಕೆಯ್ಯಾಂತೊಡಂತಲ್ಲಿ ನಿ॥
ರ್ವರವೀರಂ ಶುಚಿದಾನಿ ಶೂದ್ರಕನೊಳಾ ಗಾಂಗೇಯನೊಳ್ ಕರ್ಣನೊಳ್ ।
ಸರಿಸಂ ದಂಡಿನ ಗೋವ ಬರ್ಮಮಹಿಪಂ ವಿಶ್ವಂಭರಾ ಭಾಗದೊಳ್ ॥೨॥

## ಬನವಾಸೆ.

**ಚಂಪಕ॥**

ಫಲಭರದಿಂ ಮನಂಗೊಳಿಪ ಪೂಗವನಂ ವನದೊಳ್ ಸರೋಜಲಂ ।
ಜಲದ ಪೊನಲ್ಗಳಿಂ ಬೆಳೆದು ಕತ್ತಲಿಸಿರ್ಪೆಳೆವಳ್ಳಿ ಬಳ್ಳಿಗೊಂ ॥
ಡುಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ ।
ಕುಲಮದೆಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆ ದೇಶದೊಳ್ ॥೩॥

## ಮಹಾದೇವ ದಂಡನಾಯಕ.

**ಚಂಪಕ॥**

ಚಲವಭಿರಾಮಸನ್ಮ್ರಸ ತಪರ್ಮನೆ ಜಿನ್ನರ ಚಕ್ರವರ್ತಿ ಭೂ ।
ವಲಯದ ಭೂಷಣಂ ಚಮರ ರಾಜಸುಧಾರಸುಧಾತ್ರ ಮೂರ್ತಿನಿ ।

ರ್ಮಲತೆಯ ಜನ್ಮಭೂಮಿ ಸುಜನತ್ವದ ಸುಗ್ಗಿ ವಿಲಾಸದಾಗರಂ ।
ಕಲಿಗಳ ದೇವನೆಂಬುದನಿಶಂ ಮಹದೇವನನೀ ಜಗಜ್ಜನಂ ॥೪॥

## ಪುರಿಕರನಗರ (ಪುರಿಗೆರೆ).

**ಮಹಾಸ್ರಗ್ಧರೆ॥**

ತೆವರೆಲ್ಲಂ ದೇವತಾಮಂದಿರನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ ।
ಸುವಿರಾಜದ್ದೀರ್ಘಿಕಾಸಂಕುಲಭರಿತಪಯಃಪೂರ ನೀರೇಜಕಾಸಾ ॥
ರವೆ ಮತ್ತಂ ತತ್ಸಮಾಳಂಕೃತ ವಸುಧೆಯದೆಲ್ಲಂ ಲಸಚ್ಛಂದನೋದ್ಯಾ ।
ನವೆನಲ್ ರಮ್ಯಂ ದಲೆಂದುಂ ಪುರಿಕರನಗರೀ ಲೀಲೆ ಲೋಕಾವ
ಲೋಕಂ ॥೫॥

**ಕಂದ॥**

ಒಂದೊಂದಕ್ಷತೆಯಂ ಸಾ-
ನಂದದಿನಭ್ಯರ್ಚಿಸಲ್ಕೆ ಕೊಳಗಂ ತೀವಿ-
ತ್ತೆಂದೊಡೆ ಶಿವಲಿಂಗದ ಸಮು-
ಸಂದಮಹೋನ್ನತಿಯ ಪವಣನರಿಯೆಂ ಪೊಗಳಲ್ ॥೬॥

**ಶಾರ್ದೂಲ॥**

ನಾನಾ ದ್ವೀಪದೊಳಗ್ರಮಾ ನೆಗಳ್ದ ಜಂಬೂದ್ವೀಪಮಾದ್ವೀಪದೊಳ್ ।
ನಾನಾಕ್ಷೇತ್ರದೊಳುತ್ತಮಂ ಭರತಮಾಭೂಭಾಗದೊಳ್ ಕುಂತಲಂ ॥
ತಾನತ್ಯೂರ್ಜಿತಮಲ್ಲಿಭೋಗಿಜನರಮ್ಯಂ ಬೆಳ್ವೊಲಂತನ್ಮುಖ ।
ಸ್ಥಾನಂ ಶೋಭಿಕುಮಾಗಡುಂ ಪುರಿಕರ ಶ್ರೀರಾಜಧಾನ್ಯಾಹ್ವಯಂ ॥೭॥

## ಕಾದಂಬತೈಲ.

**ಮತ್ತೇಭ॥**

ಬಲಿಯೆಂತಂತೆ ತದೀಯ ದೇಶವನದಂ ನಿರ್ಬಾಧೆಯಿಂದಾಳ್ದುಮೆ ।
ಯ್ಗಲಿ ದಿಕ್ಕುಂಭಿಯ ಕುಂಭಸಂಭೃತಲಸತ್ಸಿಂಧೂರರಾಗಾವಿಳಂ ॥
ಬಲವತ್ತ್ರೇಜಮೆನಲ್ ಧರಾವಳಯಮುಮಂ ನಿಷ್ಕಂಟಕಂ ಮಾಡಿದಂ ।
ಪಲರುಂ ಬಣ್ಣಿಸಲುದ್ಧತಾರಿದಳನಂ ಕಾದಂಬ ಕಂಠೀರವಂ ॥೮॥

## ಬಳ್ಳಿಗಾವೆ.

**ಚಂಪಕ॥**

ಅದು ವಿಬುಧೈಕವಾಸಮಮರಾವತಿಯಂತತಿಭೋಗಿಸೇವ್ಯಮುಂ।
ತದು ಪೆಸರ್ವೆತ್ತು ರಂಜಿಸುವ ಭೋಗವತೀಪುರದಂತೆ ಭಾವಿಸ॥
ಲ್ಕಿದು ಧನದ ಪ್ರಸೇವ್ಯಮಳಕಾಪುರದಂತೆನೆ ಬಳ್ಳಿಗಾವೆಗಾ।
ವುದೊ ಪಡಿಪಟ್ಟಣಂ ನೆಗಳ್ದವಾರ್ಧಿಪರೀತ ಸಮಸ್ತ ಧಾತ್ರಿಯೊಳ್ ॥೯॥

## ಬಳ್ಳಿಗಾವೆಯ ವರ್ತಕರು.

**ಕಂದ॥** ಕಿಡುವೊಡವೆಯ ನೊಂದನೆ ಕೊ।
ಟ್ಟಿಡೆ ಮಡಗಡಿಹಂ ಪರಂಗಳೆಂಜಿರದು ಮನಂ॥
ಗಡಿಯೊಳ್ ಕಿಡದೊಡವೆಯುನಡಿ+
ಗಡಿಗಾರ್ಜಿಪರಲ್ಲಿ ನೆಗಳ್ದ ನಗರ ಜನಂಗಳ್ ॥೧೦॥

**ಚಂಪಕ॥**

ಸುರಪತಿಯಂತೆ ಸರ್ವ ವಿಬುಧಾಶ್ರಯರಿಂದ್ರಗಜೇಂದ್ರದಂತೆ ಭಾ।
ಸುರತರ ದಾನ ಸಂಪದಧಿಕೋನ್ನತರಿಂದುವಿನಂತೆ ಸತ್ಕಲಾ॥
ಧರರಹಿರಾಜನಂತೆ ನಿಖಿಲ ಕ್ಷಮೆಗಾಸ್ಪದರೆಂದೊಡೀಗಳಾರ್।
ದೊರೆಯರೊ ಬಳ್ಳಿಗಾವೆಯ ಮಹಾನಗರಂಗಳೊಳೀ ಧರಿತ್ರಿಯೊಳ್ ॥೧೧॥

**ಕಂದ॥** ಕರಿಗೆ ರದನಂ ಭಯಂಕರ।
ತರದಂಷ್ಟ್ರಾಂಕುರಮಿಭಾರಿಗುನ್ನತ ಪಕ್ಷಂ॥
ಶರಭರಿಪುಗಾದುದೆಂಬಂ।
ತಿರಲಿಸಿವರ್ ಪ್ರಭುಗಳಲ್ಲಿ ತತ್ಪತ್ತನದೊಳ್ ॥೧೨॥

## ಕುಂತಳದೇಶ.

**ಕಂದ॥** ಅಂತೆಸಿಸಿದಮರಗಿರಿಯಿಂ।
ದಂ ತೆಂಕಣದೆಸೆಯೊಳೆಸೆವ ಭಾರತವರ್ಷಾ॥
ಭ್ಯಂತರದೊಳ್ಕಾಕಾಂತೆಯ।
ಕುಂತಳಮೆನೆ ಚೆಲ್ವನಾಂತು ಕುಂತಳದೇಶಂ ॥೧೩॥

# ಭರತೇಶ ವೈಭವ.

ಶ್ರೀಜಿನಚರಣಾಬ್ಜಸುರಭಿಮಧುವ್ರತ । ರಾಜಾಧಿರಾಜಾಗ್ರಗಣ್ಯ ॥
ರಾಜಿತಹಂಸಕಲ್ಯಾಣಂದ ನಿನಗೆ ಮ । ಹಾಜಯ ಸಿದ್ಧಿರಸ್ತೆಂದಾ ॥೧॥

ಜಯಸಿದ್ಧಿಯೆಂಬುದು ವೈರಿಭೂಪರನೊತ್ತಿ । ಜಯಿಸಿದರದು ಲೌಕಿಕಾರ್ಥ ॥
ಭಯಬಡಿಸುವ ಕಾಲಕರ್ಮವನೊತ್ತಿ । ಜಯಿಸಿದರದು ಪರಮಾರ್ಥ ॥೨॥

ಲೌಕಿಕಜಯವಂತರುಂಟು ಪಲಂಬರಾ । ಲೌಕಿಕಪರಮಾರ್ಥವೆರಡಾ ॥
ಭೂಕಾಂತರಲ್ಲಿ ಪಡೆವುದು ದುರ್ಲಭ ಸುವಿ । ವೇಕ ಬೇಕದಕೆ ಚಕ್ರೇಶ ॥೩॥

ಭೋಗವಿಚಾರವು ಬೇಕು ನೃಪತಿಗಾತ್ಮ । ಯೋಗವಿಚಾರವು ಬೇಕು ॥
ರಾಗರಸಿಕನಾಗಬೇಕು ಭಾವಿಸೆ ವೀತ । ರಾಗರಸಿಕನಾಗಬೇಕು ॥೪॥

ಶೃಂಗಾರ ಕೋವಿದನಾಗಬೇಕಾತ್ಮ ಸು । ಸಂಘ ಸಂಮುಖನಾಗಬೇಕು ॥
ಸಂಗರಸಂಮುಖನಾಗಬೇಕಾತ್ಮ ಯೋ । ಗಾಂಗ ಕೋವಿದನಾಗ ಬೇಕು ॥೫॥

ಇಹಲೋಕ ಸುಖವ ಭೋಗಿಸಬೇಕು ನೃಪತಿಯು । ತ್ಸಹನಾಗಬೇಕು ಧರ್ಮದೊಳು ॥
ಬಹು ಕಾಂಕ್ಷೆಯೊಳು ಸಿಕ್ಕಿದಂತಿರಬೇಕು ನಿಃ । ಸ್ಪೃಹನಾಗಬೇಕೆದೆಯೊಳಗೆ ॥೬॥

ಧರ್ಮದಿಂದಾದುದು ಸಿರಿಯೆಂದು ಸುಖಿಸುತ್ತ । ಧರ್ಮವ ಮರೆಯರುತ್ತಮರು ॥
ಧರ್ಮವೇತರದೆಂದು ಭೋಗಕ್ಕೆ ಮರುಳಾಗಿ । ಕರ್ಮಿಗಳಾಚರಿಸುವರು ॥೭॥

ಕೊಡಬೇಕು ಕೊಡುವಲ್ಲಿ ಪಾತ್ರವರಿಯಬೇಕು । ನುಡಿಬೇಕು ಮೌನವೂ ಬೇಕು ॥
ಬಡವರಂತಿರಬೇಕು ಪ್ರಭುವಿನಂತಿರಬೇಕು । ನಡೆಯಿದು ಜಾತಿಕ್ಷತ್ರಿಯರ ॥೮॥

ಪ್ರಜೆಪರಿವಾರಕ್ಕೆ ಹಿತನಂತೆ, ವೈರಿಭೂ। ಭುಜರಿಗೆ ಭುಜಗೇಂದ್ರನಂತೆ
ನಿಜಗುರುವಿಗೆ ಭೃತ್ಯನಂತೆ ಧಾರ್ಮಿಕರಿಗೆ। ನಿಜಬಂಧುವಾಗಿರಬೇಕು ॥೯॥

ಹವಣಿಸಿಕೊಳ್ಳಬೇಕಿಂದ್ರಿಯವರ್ಗವ॥ ನವಿಚಳನಾಗಿರಬೇಕು॥
ಭುವನಕಿಂದಿನರಾಯ ಸ್ವರ್ಗಕೆ ನಾಳಿನ। ದಿವಿಜೇಂದ್ರನೆನಿಸಿರಬೇಕು ॥೧೦॥

ಎರಳೆ ಮೀನಾನೆ ಪತಂಗ ತುಂಬಿಗಳು ಕಾ। ತರಿಸಿಯೊಂದೊಂದಿಂದ್ರಿ
ಯದೊಳು॥
ಪರಿಭವವಡೆದವಿನ್ನೈದಿಂದ್ರಿಯಕೆ ಸಿಕ್ಕಿ। ದರಸು ಕೆಡುವುದಾವ ಚೋದ್ಯ॥೧೧॥

ಸಿರಿಗುಬ್ಬನೆಡರಿಗೆ ತಗ್ಗನಾತ್ಮಜ್ಞಾನಿ। ಪರಿಹಾಸಗೋಷ್ಠಿಗೆಳಸನು॥
ಹರವರ್ತಿಯಾಗಿ ನುಡಿಯನು ಧೈರ್ಯದೊಳುಮಂ। ದರದಂತಿಹನು
ರಾಜೇಂದ್ರ ॥೧೨॥

ಇಂದ್ರಿಯಸುಖದೊಳಾಸಕ್ತನಾಗನು ದೇ। ವೇಂದ್ರನ ಸಿರಿಗೆ ಕಣ್ಣಿಡನು।
ಇಂದ್ರಿಯದನುಭವದೊಳಗಿಹನಹುದು ಯೋ। ಗೀಂದ್ರವೃತ್ತಿಗೆ ಮೆಚ್ಚು
ತಿಹನು ॥೧೩॥

ಹಂಸನಿರೀಕ್ಷಣದಿಂದುಮ್ಮಿದಮೃತವ। ಹಂಸನಂತೀಂಟಿದಣಿವನು॥
ಸಂಸಾರಸುಖವನುದಾಸೀನಭಾವಾವ। ತಂಸದೊಳನುಭವಿಸುವನು ॥೧೪॥

ಅಡಿಗಡಿಗಾತ್ಮತತ್ವದೊಳಿರ್ದು ಕರ್ಮವ। ಕೆಡಿಸುತಿಹನು ಕಿರಿದಾಗಿ॥
ಕಡುಸಂಯಮಿಯಾಗಿ ಮುಕ್ತಿಗೈದುವೆನೆಂಬ। ದೃಢವಿರುತಿಹುದೆದೆಯೊ
ಳಗೆ ॥೧೫॥

ಭೂಮಿಯೊಳಗೆ ಹೂಳ್ದ ಲೋಹ ಮಣ್ಣಿಡಿವುದು। ಹೇಮ ಮಣ್ಣಿಡಿ
ವುದೇ ನೃಪತಿ।
ಕಾಮಿಸಿ ಭೋಗಿಸುವಗೆ ಕರ್ಮಬಂಧ ನಿ। ಷ್ಕಾಮಭೋಗಿಗೆ ಬಂಧ
ವುಂಟೆ ॥೧೬॥

ಹುರಿದು ಬಿತ್ತಿದ ಬೀಜ ಮೊಳೆವುದೆ ರಾಗಾಂ। ಕುರವ ಕೆಡಿಸಿದಾತ
ವೇದಿ।
ಪರಭೋಗದೊಳಿಪ್ಪರೇನಲ್ಲಿ ಮುಂದೆ ನಿ। ಷ್ಕುರಕರ್ಮಮುತ್ಪತ್ತಿ
ಯುಂಟೆ ॥೧೭॥

ಈ ಸಿರಿ ಈ ಸೊಬಗೀ ಪ್ರಾಯದೊಳು ಬುದ್ಧಿ । ಬೇಸರವಾಗದೆಚ್ಚೆತ್ತು ॥
ಆ ಸಿದ್ಧಪದವಿಗೆ ಕಣ್ಣಿಟ್ಟು ತತ್ವವಿ । ಲಾಸಿಯಾರರಸ ನಿನ್ನಂತೆ ॥೧೮॥

ಇವನನವನ ಗೆಲ್ವರಾವುದುಪಾಯವೆಂ । ದವನಿಯೊಳೆಣಿಸುವರುಂಟು ॥
ಜವನ ಜಯಿಸುವರುಪಾಯವೇನೆಂದೆಂಬ । ಭುವನೇಶರುಂಟೆ
ನಿನ್ನಂತೆ ॥೧೯॥

ಗದ್ದುಗೆಯೇರಿ ದುಷ್ಕಥೆಗೇಳಿ ಹಲಬರು । ಬಿದ್ದುಹೋಗುವರಧೋಗತಿಗೆ॥
ಗದ್ದುಗೆಯೇರಿ ಸತ್ಕಥೆಗೇಳಿ ಮುಕ್ತಿಯ । ಹೊದ್ದುವರಾರು ನಿನ್ನಂತೆ ॥೨೦॥

ಒಳಗಿದ್ದ ದೇವನ ಕಾಣದೆ ಹೊರಗೆ ದೇ । ಗುಲವ ಪೂಜಿಸುವೆಗ್ಗನಂತೆ ॥
ಒಳಗಣಾತ್ಮನ ಬಿಟ್ಟು ವೈಯನೆ ತಾನೆಂದು । ಸಲೆ ಹೊಗಳಿಕೊಳು
ತಿಹರು ॥೨೧॥

ನೃತ್ಯಕೇಳಿಯೊಳು ಸಂಗೀತಕೇಳಿಯೊಳು ಸಾ । ಹಿತ್ಯಕೇಳಿಯೊಳಾತ್ಮಕ
ಲೆಯಾ ॥
ಅತ್ಯಂತ ಮಮತೆಯೊಳಾದರಿಸುವ ಕೃತ । ಕೃತ್ಯರಾರರಸ ನಿನ್ನಂತೆ ॥೨೨॥

ಸತ್ಪಾತ್ರದಾನಿಗೆ ತತ್ವವಿಜ್ಞಾನಿಗೆ । ಚಿತ್ಪರಿಣಾಮಾನುಭವಿಗೆ ।
ಸತ್ಪುರುಷರು ಸೋಲ್ವರರಸ ತುಂಬಿಗಳು ಮ । ಹೋತ್ಪಲರಸಕೆ
ಸೋಲ್ವಂತೆ ॥೨೩॥

ರವಿಶಶಿಗಳ ಕಟ್ಟಿ ಪ್ರಾಣಾಪಾನ ವಾ । ಯುವ ಬ್ರಹ್ಮರಂಧ್ರ ಕೇರಿಸಲು
ಕವಿದ ಕತ್ತಲೆಗೆಟ್ಟು ವೈಯೊಳಗಾತ್ಮ ತೋ । ರುವನು ಪ್ರಕಾಶರೂ
ಪಾಗಿ ॥೨೪॥

ಎಳೆಮಿಂಚಿನಂದದ ಬೊಂಬೆಯೊ ತಿಂಗಳ । ತಿಳಿವೆಳಗಿನೊಳಾದ ರೂಪೋ॥
ಪಳಕಿನ ಪುತ್ಥಳಿಯೋಯೆನೆ ಕ್ರಮದಿಂದ । ಹೊಳೆವುದೊಳಗೆ ತನ್ನ
ರೂಪು ॥೨೫॥

ಬಾವನ್ನವೃಕ್ಷದೊತ್ತಿನೊಳಿರ್ದ ಮರಗಳು । ತಾವೆಲ್ಲ ಕಮ್ಮನಪ್ಪಂತೆ ॥
ದೇವ ನಿನ್ನೊಡನಾಡಿ ನಾವೆಲ್ಲರರಿದೆವು । ಜೀವಶುದ್ಧಿಯ ತುದಿ
ಮೊದಲಾ ॥೨೬॥

---

# ತೊರವೆ ರಾಮಾಯಣ.

## ಶ್ರೀರಾಮ ಮುದ್ರಿಕಾಪ್ರದಾನ.

ಪುರವ ಕಾಣುತ ಕಾಯುವನು ಸಂ-
ಹರಿಸಿಕೊಂಡು ಸಮೀರಸುತನಾ
ಸುರ ಭಟಾವಳಿಯರಿಯದಂತಿರೆ ತತ್ಪುರಾಂತಿಕದ ॥
ಸುರವನೋದ್ಯಾನದ ಸಘಾಟಿಕೆ
ಸರಿಯೆನಿಪ ನಂದನದ ಮಧ್ಯದ
ಸುರತರುವಿನಲಿ ನಿಂದಿದನು ಲಾಘವದ ಗಮನದಲಿ ॥೧

ಆವಕಡೆಯಲ್ಲಿ ನೋಡಿದರೆ ಲ-
ಕ್ಷ್ಮೀವಿಲಾಸವ ವಿಮಲಮಂಟಪ-
ವಾವ ಕಡೆಯಲಿ ತಿರುಗಿದರೆ ಮಣಿಭದ್ರಭವನಚಯ ॥
ಆವ ಕಡೆಯಲಿ ಹೊಕ್ಕರನುಪಮ
ದೇವ ಪೂಜಾಗೃಹಗಳಿದ್ದವು
ಶ್ರೀವರನ ಪಾಲ್ಗಡಲ ಮಧ್ಯದ ಭವನದಂದವಲಿ ॥೨॥

ನನೆ ಮುಗುಳ್ಗಳ ಕುಸುಮ ನಸುಗಾಯ್
ಕನರುಗಾಯ್ ಹುಳಿಗಾಯಿ ಪಣ್ಗಳ
ತನಿರಸದ ಮಧುರಾಮ್ರಪೂರಿತ ಮಾಧುರೀಯುಕವ ॥
ತೊನೆದು ತೂಗುವ ಫಲಭರಂಗಳ
ಘನತರದ ಸಹಕಾರ ಸಹಸುರ
ವನ ಕದಂಬಕವೆಸೆಮುದಿದಿರಲಿ ಕಪಿಕುಲೇಶ್ವರನ ॥೩॥

ತಿಳಿಗೊಳನ ದಾಂಟುತ ಲತಾಮಂ
ಡಳಿಯ ನುಸುಳುತ ಕುಸುಮ ವಲ್ಲಿಗ
ಳೊಳಗೆ ವಿಹರಿಸುತುನ್ನತ ದ್ರುಮತತಿಯ ಲಂಘಿಸುತ ॥

ಕೆಲಬಲವನಾರೈವುತೊಯ್ಯನೆ
ನಿಲುಕಿ ನೋಡುತ ಬಂದನುರು ಮಂ
ಜುಳ ಫಲಾನ್ವಿತ ಶಿಂಶುಪಾಖ್ಯ ದ್ರುಮದ ಹೊರೆಗಾಗಿ ॥೪॥

ಆ ಮಹಾದ್ರುಮದಡಿಯ ಕದಳೀ
ಸ್ತೋಮ ಮಧ್ಯದ ದಳನಿಳಯದಲಿ
ರಾಮನಾಮಾಮೃತಸಜೀವಕತ್ರಾಣಧಾರಕದ ॥
ತಾಮರಸದಳನಯನೆಯನು ನಿ-
ಸ್ಸೀಮ ಸುವ್ರತ ಚರಿತೆಯನು ಸೀ-
ತಾ ಮಹಾಲಕ್ಷ್ಮಿಯನು ಕಂಡನು ವೀರ ಹನುಮಂತ ॥೫॥

ಶರಭ, ಸಿಂಹ, ಚಮೂರು ವದನದ
ಕರಿ, ಲುಲಾಯ ವೃಕಾನನದ ಪರಿ
ಪರಿಯ ಖಗ-ಮೃಗ-ಸರ್ಪವಕ್ತ್ರದ ವಿಕೃತದೃಷ್ಟಿಗಳ ॥
ಎರಡು ನಾಲ್ಕೈದಾರು ತಲೆಗಳ
ಕರದ ಕತ್ತಿಯ ಕಾಳರಕ್ಕಸ
ತರುಣಿಯರ ಕಾವಲಿನ ಸೀತೆಯ ಕಂಡನಾ ಹನುಮ ॥೬॥

ಏಕವೇಣೀಧರೆಯನಶ್ರುಜ
ಲಾಕುಲಾಯತ ಲೋಚನೆಯನು-
ದ್ರೇಕ ಶೋಕಾನ್ವಿತೆಯನಂತಸ್ತಾಪ ವಿಹ್ವಲೆಯ ॥
ಶೋಕವನದಡಿಯಧಿಕಪುಣ್ಯ-
ಶ್ಲೋಕಚರಿತೆಯ ಮಲಿನಪಟಪರಿ-
ಧಾಕೃತೆಯನವಿರಳಕೃಶಾಂಗಿಯ ಕಂಡನಾ ಹನುಮ ॥೭॥

ಹೊಗೆಯುಲದ್ದ ಪುತ್ಥಳಿಯವೊಲು ಹಿಮ
ವಗಿದ ತಾವರೆಯಂತೆ ಬಿಚ್ಚದೆ
ಬಿಗಿದ ಮುತ್ತಿನ ಚಿಪ್ಪಿನಂದದಿ ರಾಹು ಲಂಬಿಸಿದ ॥
ಮೃಗಧರನವೊಲು ಗೂಢದರ್ಥವ
ತೆಗೆಯಬಾರದ ಕೃತಿಯ ವೋಲಿ-
ರ್ದಗಣಿತಾಮಲಪುಣ್ಯಮೂರ್ತಿಯ ಕಂಡನಾ ಹನುಮಾ ॥೮॥

ರಾಮರಘುಕುಲವಾರ್ಧಿವರ್ಧನ
ಸೋಮ ಸೋಮಾಹ್ಲಾದಕರ ನಿಜ
ರಾಮನಿರುಪಮರಮ್ಯವಿಗ್ರಹ ವಿನುತವಿಖ್ಯಾತ ॥
ರಾಮ ರಾಘವ ರಾಕ್ಷಸಾನ್ವಯ
ಭೀಮ ಭಾರ್ಗವರಾಮಬಲಜಯ
ರಾಮ ತನಗಿನ್ನೇನು ಗತಿ ಹೇಳೆಂದಳಬುಜಾಕ್ಷಿ ॥೯॥

ಬಂದೆನಂಬುಧಿ ದಾಂಟಿ ಕಂಡೆನು
ಸಂದ ಸುವ್ರತೆಯಂಘ್ರಿ ಕಮಲವ
ನೆಂದೆನಲು ಮೊಗ ನೆಗಹಿ ನೋಡಿದಳಾ ಮಹೀರುಹವ ॥
ಹೊಂದಿಕೆಯು ಹೊಲಬಲ್ಲವೀ ನುಡಿ
ಯೆಂದು ಸತಿ ಮೊಗದಿರುಹಲೊಡನಿಂ-
ತೆಂದನಾ ಹನುಮಂತ ಹವಣಿಸಿದುಚಿತವಚನದಲಿ ॥೧೦

ಅಂಜಬೇಡಾಸುರವಿಕಾರದ
ರಂಜಕರು ನಾವಲ್ಲವೆನುತ ಧ-
ನಂಜಯನ ಸುಖಸುತನು ಬಿನ್ನೈಸಿದನು ಕೈಮುಗಿದು ॥
ಅಂಜಬೇಡೆಲೆ ತಾಯೆ ದಾನವ
ಭಂಜಕನ ಭೃತ್ಯನು ಕಣಾ ತಾ
ನಂಜನಾಸುತ ಹನುಮನೆಂಬುದು ಹೆಸರಲೇ ತನಗೇ ॥೧೧

ನೀನು ಕಪಿ ನರನಾಥನಾ ರಘು
ಸೂನುವಿದು ತಾನು ಸ್ವಾಮಿಭೃತ್ಯಮ-
ಹಾನುಭವಕನುನಯವೆ ತಾನಿದಸಂಗತದ ಮಾತು ॥
ವಾನರರು ವಾರಿಧಿಯ ದಾಂಟುವ
ದೇನಿದಚ್ಚರಿಯಲ್ಲವೇ ಮಾ-
ಯಾನಿಬದ್ಧೋಕ್ತಿಗಳಿಗಂಜುವೆನೆಂದಳಾ ಸೀತೇ ॥೧೨॥

ಜನನಿ ಕೇಳ್ ನಿಮ್ಮರಸನನುಪಮ
ವನರುಹಾಂಘ್ರಿಯ ಸೇವಕರಿಗೀ
ನೆನಹು ದೊಡ್ಡಿತೆ ಶರಧಿಯನ್ನುತ್ತರಿಸುವಂದವನು ॥

ಜನನಿ ಚಿತ್ತೈಸೆನುತ ವರ ವಾ
ಮನ ತ್ರಿವಿಕ್ರಮನಾದವೊಲು ಬೆಳೆ
ದನು ಮಹೀತಳವದುರುವವೊಲಂಬರದ ತುದಿಗಾಗಿ ॥೧೩॥

ಮೂರು ಭಾಗದ ಸಂಶಯವು ಕೆಲ
ಸಾರಿತವನೀಸುತೆಗೆ ನಂಬುಗೆ
ದೋರದಿರೆ ತುದಿಯಂಶ್ವದಲಿ ಹನುಮಂತನಾ ಹದನ ॥
ಮಾರುನುಡಿಯುವದಿರಲರಿದು ಮನ
ವಿರುವುದಲಾಯೆಂದು ಮಣಿಗಣ
ದೂರ್ಮಿಕೆಯ ಮುದ್ರಿಕೆಯನಿತ್ತನು ರಮೆಗೆ ರಾಘವನ ॥೧೪॥

ಕಮಲಮುಖಿ ಸಮ್ಮುಖತೆಯ ಘನ ಸಂ-
ಭ್ರಮದ ಪರಮಾನಂದದಲಿ ನಿಜ
ರಮಣನೆಂದೇ ವಂದಿಸಿದಳಾ ರಾಮಮುದ್ರಿಕೆಗೆ ॥
ತಮವನುರೆ ಜರಿದುರುಳ್ವ ಕಿರಣದ
ವಿಮಲರತ್ನದ ನಡುವೆ ಹೊಳೆದುದು
ಕಮಲನಯನನ ಮೂರ್ತಿ ಕಂಗಳಿಗಾ ಪತಿವ್ರತೆಯ ॥೧೫॥

---

# ಸ್ವಪ್ನವಾಸವದತ್ತ ನಾಟಕಂ.



## ಚತುರ್ಥಾಂಕಂ.

(ವಿದೂಷಕನು ಪ್ರವೇಶಿಸುವನು

ವಿದೂ— (ಹರ್ಷದೊಡನೆ) ಭಲೆ! ಭಲೆ! ಅದೃಷ್ಟವಶದಿಂದ ನಮ್ಮ ಮಿತ್ರನಾದ ವತ್ಸರಾಜನಿಗೆ ಅನುರೂಪಳೂ ಇಷ್ಟಳೂ ಆದ ಕನ್ಯೆಯು ದೊರೆತು, ಅವನ ವಿವಾಹಮಹೋತ್ಸವ ಸಂಭ್ರಮಗಳನ್ನೆಲ್ಲ ಕಣ್ಣಾರೆ ನೋಡಿ ಆನಂದಿಸುವ ಭಾಗ್ಯವು ನನಗೆ ಲಭಿಸಿತು. ಆಹಾ! ಅಂತಹ ಮಹಾನರ್ಥವೆಂಬ ಪ್ರವಾಹದ ಸುಳಿಯಲ್ಲಿ ಮುಳುಗಿಯೇ ಹೋಗಿದ್ದ ನಾವು ತಿರುಗಿ ಹೀಗೆ ಮೇಲೆದ್ದು ಬರುವೆವೆಂದೂ, ತಿರುಗಿ ನಮಗೆ ಈ ಅರಮನೆಯ ಉಪ್ಪರಿಗೆಗಳಲ್ಲಿ ವಾಸವೂ, ಅಂತಃಪುರದ ಬಾವಿಗಳಲ್ಲಿ ಸ್ನಾನವೂ, ಒಳ್ಳೇ ರುಚಿ ರುಚಿಯಾಗಿಯೂ, ಬಾಯಿಗೆ ಮೃದುವಾಗಿಯೂ ಇರುವ ಕಡುಬು ಮುಂತಾದ ಭಕ್ಷ್ಯಗಳ ಯಥೇಚ್ಛ ಭೋಜನವೂ ಲಭಿಸುವುದೆಂದು ಯಾರುತಾನೇ ಕಂಡಿದ್ದರು? ಮುಖ್ಯವಾಗಿ ಈಗ ನಾನು ಅಪ್ಸರಸಿಯರಿಲ್ಲದ ಉತ್ತರಕುರು (ಸ್ವರ್ಗ) ವಾಸವನ್ನೇ ಅನುಭವಿಸುತ್ತಿರುವೆನು. ಆದರೆ ಈಗ ನನಗೆ ಒಂದು ಮಾತ್ರ ದೊಡ್ಡ ಕೊರತೆಯಿದೆ! ಆಹಾರವು ಸರಿಯಾಗಿ ಜೀರ್ಣವಾಗುವುದಿಲ್ಲ. ಮೆತ್ತಗೆ ಹಾಸಿದ ಹಾಸುಗೆಯಲ್ಲಿ ಮಲಗಿದರೂ ಕಣ್ಣಿಗೆ ನಿದ್ರೆ ಹತ್ತುವುದಿಲ್ಲ! ಅಜೀರ್ಣವಾತವು ಅಂಗಾಂಗದಲ್ಲಿ ಕೀಲುಕೀಲುಗಳನ್ನೆಲ್ಲ ವ್ಯಾಪಿಸಿದಂತಿದೆ. ಏನು ಮಾಡಲಿ! ಛೀ! ಹೀಗೆ ಅಜೀರ್ಣಕ್ಕೆ ಹೆದರಿ ಬಾಯಿಗೆ ಬೇಕಾದ ಆಹಾರಪದಾರ್ಥಗಳನ್ನು ಪುಷ್ಕಲವಾಗಿ ತಿನ್ನುವುದಕ್ಕಿಲ್ಲದೆ, ಬಾಯಿ ಕಟ್ಟಿ ಬದುಕುವ ಈ ಬಾಳು ಸುಖವಲ್ಲ!

(ಚೇಟಿಯು ಪ್ರವೇಶಿಸುವಳು)

ಚೇಟಿ— ಆರ್ಯವಸಂತಕನೆಲ್ಲಿ ಹೋಗಿರುವನೋ ಕಾಣೆನಲ್ಲಾ! (ಸು
ನೋಡಿ) ಓಹೋ! ಇಲ್ಲಿಯೇ ಇರುವನು. ಆರ್ಯವಸಂತ
ಎಷ್ಟು ಹೊತ್ತಿನಿಂದ ನಿನ್ನನ್ನು ಹುಡುಕುವುದು?

ವಿದೂ— ಏಕಮ್ಮಾ? ನನ್ನನ್ನು ನೀನು ಹುಡುಕಬೇಕಾದ ಕಾರ್ಯವೇನು

ಚೇಟಿ— ನಮ್ಮ ಮಹಾರಾಣಿಯು ಅಳಿಯನಿಗೆ ಸ್ನಾನವಾಯಿತೋ ಇಲ್ಲವೊ
ತಿಳಿದು ಬಾ ಎಂದು ಹೇಳಿ ಕಳುಹಿಸಿರುವಳು.

ವಿದೂ— ಏತಕ್ಕಾಗಿ ಅವಳು ಹಾಗೆ ಕೇಳಿರುವಳು!

ಚೇಟಿ— ಬೇರೇನಿದೆ? ಅವನ ದೇಹಾಲಂಕರಣಾರ್ಥವಾಗಿ ಗಂಧಪುಷ್ಪಾ
ಗಳನ್ನು ಕಳುಹಿಸಿಕೊಡುವುದಕ್ಕೆ!

ವಿದೂ— ಹಾಗಿದ್ದರೆ ರಾಜನಿಗೆ ಸ್ನಾನವಾಯಿತೆಂದು ತಿಳಿಸು ಹೋಗು
ಹೂವೋ ಗಂಧವೋ ಯಾವುದಿದ್ದರೆ ಅವೆಲ್ಲವನ್ನೂ ತಂದೊಪ್ಪಿಸ
ಆದರೆ ಭೋಜನವನ್ನು ಮಾತ್ರ ತರಬೇಡ!

ಚೇಟಿ— ಅದೇಕೆ? ಭೋಜನವನ್ನು ಮಾತ್ರ ತರಬಾರದೆಂಬುದೇಕೆ

ವಿದೂ— ಭದ್ರೆ! ನಾನೇನು ಹೇಳಲಿ? ಮಂದಭಾಗ್ಯನಾದ ನನಗೆ ಅ
ರ್ಣವಾಗಿ, ಅದರ ಮೇಲೆ ಕೋಗಿಲೆಗಳ ಕಣ್ಣುಗಳಂತೆ ಹೊಟ್ಟೆಯ
ಬಹಳವಾಗಿ ತೊಳಸುತ್ತಿದೆ.

ಚೇಟಿ— ನಿನಗೆ ಹಾಗೆಯೇ ಆಗಬೇಕು. ಯಾವಾಗಲೂ ಹಾಗೆಯೇ ಇರ

ವಿದೂ— ಇನ್ನು ನೀನು ಹೋಗು! ನಾನೂ ರಾಜನ ಬಳಿಗೆ ಹೋಗುವೆನ

(ಹೋಗುವರು)

ಇದು

## ಪ್ರವೇಶಕವು.

(ಪದ್ಮಾವತಿಯು ತನ್ನ ಚೇಟಿಯರೊಡನೆಯೂ ಅವಂತಿಕನ್ಯಾವೇಷವುಳ್ಳ ವಾಸ
ದತ್ತೆಯೊಡನೆಯೂ ಪ್ರವೇಶಿಸುವಳು.)

ಚೇಟಿ— ರಾಜಪುತ್ರಿ! ನೀನು ಈಗ ಈ ಉದ್ಯಾನಕ್ಕೆ ಬಂದ ಕಾರ
ವೇನೋ ತಿಳಿಯಲಿಲ್ಲವಲ್ಲಾ!

ಪದ್ಮಾ— ನಮ್ಮ ತೋಟದಲ್ಲಿದ್ದ ಶೇಫಾಲಿಕಾಲತೆಯು ಪುಷ್ಪಿಸಿತೋ ಇಲ್ಲವೋ ನೋಡಬೇಕೆಂದು ಬಂದೆನು.

ಚೇಟಿ— ರಾಜಪುತ್ರಿ! ಅವು ಚೆನ್ನಾಗಿ ಪುಷ್ಪಿಸಿ, ನಡುನಡುವೆ ಹವಳಗಳನ್ನು ಪೋಣಿಸಿದ ಮುತ್ತಿನ ಹಾರದಂತೆ ಕಾಣಿಸುತ್ತಿವೆ.

ಪದ್ಮಾ— ಹಾಗಿದ್ದರೆ ತಡವೇಕೆ? ಅವುಗಳನ್ನು ಬೇಗನೆ ಕುಯ್ದು ತರಬಾರದೇ?

ಚೇಟಿ— ಇದೋ ಈಗಲೇ ಕುಯ್ದು ತರುವೆನು. ಸ್ವಲ್ಪಹೊತ್ತು ಈ ಶಿಲಾತಲದ ಮೇಲೆ ಕುಳಿತಿರು!

ಪದ್ಮಾ— ಪೂಜ್ಯಳೇ! ಇಲ್ಲಿ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳುವೆವೇ?

ವಾಸವದತ್ತೆ— ಆಗಲಿ.

(ಇಬ್ಬರೂ ಕುಳ್ಳಿರುವರು.)

ಚೇಟಿ— (ಹೂಗಳನ್ನು ಕುಯ್ದು ತಂದು) ರಾಜಕುಮಾರೀ! ಇದೋ! ಮಣಿಶಿಲೆಯ ಹರಳುಗಳಂತೆ ನನ್ನ ಕೈಯಲ್ಲಿರುವ ಈ ಹೂಗಳನ್ನು ನೋಡು.

ಪದ್ಮಾ— ಆಹಾ! ಇವು ಎಷ್ಟು ವಿಚಿತ್ರವಾಗಿರುವವು! ಆರ್ಯೇ! ನೋಡಿದೆಯಾ ಈ ಹೂಗಳನ್ನು?

ವಾಸವದತ್ತೆ— (ನೋಡಿ) ಆಹಾ! ಇವು ಏಷ್ಟು ಮನೋಹರವಾಗಿರುವುವು?

ಚೇಟಿ— ರಾಜಕುಮಾರೀ! ನಿನಗಾಗಿ ಇನ್ನಷ್ಟು ಹೂಗಳನ್ನು ಕುಯ್ದು ತಂದುಕೊಡಲೇನು?

ಪದ್ಮಾ— ಸಖಿ! ಬೇಡ! ಬೇಡ! ಇಷ್ಟೇ ಸಾಕು! ಇನ್ನು ಆ ಗಿಡದಲ್ಲಿ ಹೂಗಳನ್ನು ಕುಯ್ಯಬೇಡ!

ವಾಸವದತ್ತೆ— ಸಖಿ! ಅದೇಕೆ ಬೇಡವೆನ್ನುವೆ?

ಪದ್ಮಾ— ಆರ್ಯೇ! ನನ್ನ ಪ್ರಿಯನು ಇಲ್ಲಿಗೆ ಬಂದಾಗ ಆ ಪುಷ್ಪಸಮೃದ್ಧಿಯನ್ನು ನೋಡಿ ಸಂತೋಷಪಟ್ಟರೆ ನನಗೆ ಅದೊಂದು ದೊಡ್ಡ ಬಹುಮಾನವಲ್ಲವೆ?

ವಾಸವದತ್ತೆ— ಸಖೀ! ಈಗಾಗಲೇ ನಿನಗೆ ನಿನ್ನ ಕಾಂತನಲ್ಲಿ ಇಷ್ಟೊಂದು ಪ್ರೇಮವಿಶೇಷವೇ?

ಪದ್ಮಾ— ಆರ್ಯೆ! ಅದೇನೋ ಕಾಣೆನು. ಅವನನ್ನು ಸ್ವಲ್ಪಹೊತ್ತು ಕಾಣದಿದ್ದರೂ ನನ್ನ ಮನಸ್ಸು ತಪಿಸುವುದು!

ವಾಸವದತ್ತೆ— (ಸ್ವಗತಂ) ಇವಳೇ ಹೀಗೆ ಹೇಳಬೇಕಾದರೆ, ಈಗ ನಾನು ನಡೆಸುತ್ತಿರುವುದು ಅತಿ ದುಷ್ಕರವಾದ ಕಾರ್ಯವಲ್ಲವೇ?

ಚೇಟಿ— ರಾಜಪುತ್ರಿಯು ತನ್ನ ಕಾಂತನು ತನಗೆ ಅತ್ಯಂತ ಪ್ರಿಯನೆಂದು ಹೇಳುವುದು ಅವಳ ಗುಣಕ್ಕೆ ಉಚಿತವೇ ಅಲ್ಲವೆ?

ಪದ್ಮಾ— ಆದರೆ ನನಗೆ ಮಾತ್ರ ಒಂದು ಸಂದೇಹವುಂಟು.

ವಾಸವದತ್ತೆ— ಏನದು? ಆ ಸಂದೇಹವೇನು?

ಪದ್ಮಾ— ಈಗ ನನ್ನ ಪ್ರಿಯನು ನನ್ನ ವಿಷಯದಲ್ಲಿ ಹೇಗಿರುವನೋ ಹಾಗೆಯೇ ಮೊದಲು ಅವನ ಪ್ರಥಮಭಾರ್ಯೆಯಾದ ವಾಸವದತ್ತೆಯ ವಿಷಯದಲ್ಲಿಯೂ ಪ್ರೀತಿಯನ್ನು ತೋರಿಸುತ್ತಿದ್ದಿರಬಹುದೆ?

ವಾಸವದತ್ತೆ— ಇದಕ್ಕಿಂತಲೂ ಹೆಚ್ಚಾಗಿ ಅವಳನ್ನು ಪ್ರೀತಿಸುತ್ತಿದ್ದನು

ಪದ್ಮಾ— ಅದನ್ನು ನೀನು ಹೇಗೆ ಬಲ್ಲೆ?

ವಾಸವದತ್ತೆ— (ಸ್ವಗತಂ) ಅಯ್ಯೋ! ಈಗೇನುಮಾಡಲಿ! ಕಾಂತನಲ್ಲಿರುವ ಪಕ್ಷಪಾತದಿಂದ ನಾನು ನನ್ನ ಸ್ಥಿತಿಯನ್ನು ಯೋಚಿಸದೆ ತಪ್ಪು ಮೀರಿ ಮಾತಾಡಿಬಿಟ್ಟೆನಲ್ಲಾ! ಇರಲಿ! ಈಗ ಹೀಗೆಂದು ಹೇಳುವೆನು. (ಪ್ರಕಾಶಂ) ಸಖಿ! ಈಗಲೂ ರಾಜನು ಆ ಪ್ರಥಮ ಭಾರ್ಯೆಯನ್ನು ಕುರಿತು ದುಃಖಿಸುವುದರಿಂದಲೇ ಊಹಿಸಬಹುದಲ್ಲವೆ? ಪ್ರೇಮವು ಅಲ್ಪವಾಗಿದ್ದರೆ ಅವಳಿಗಾಗಿ ಇಷ್ಟೊಂದು ದುಃಖಿಸುತಿದ್ದನೇನು?

ಪದ್ಮಾ— ಸರಿಯೆ! ಇರಬಹುದು!

ಚೇಟಿ— ರಾಜಪುತ್ರೀ! ಈಗ ನೀನೂ ನಿನ್ನ ಕಾಂತನನ್ನು "ನನಗೂ ವೀಣೆಯನ್ನು ಕಲಿಸಿಕೊಡು" ಎಂದು ಮೆಲ್ಲಗೆ ಕೇಳಬಾರದೇಕೆ?

ಪದ್ಮಾ— ಸಖಿ! ನಾನು ಆಗಲೇ ಕೇಳಿದೆನು.

ವಾಸವದತ್ತೆ— ಅದಕ್ಕವನೇನು ಹೇಳಿದನು?

ಪದ್ಮಾ— ಮಾತಾಡದೆ, ಸ್ವಲ್ಪ ದೊಡ್ಡದಾಗಿ ನಿಟ್ಟುಸಿರನ್ನು ಮಾತ್ರ ಬಿಟ್ಟು, ಸುಮ್ಮನಿದ್ದನು.

ವಾಸವದತ್ತೆ— ಅದಕ್ಕೇನು ಕಾರಣವಿರಬಹುದೆಂದು ನೀನು ಊಹಿಸುವೆ?

ಪದ್ಮಾ— ಆಗ ಅವನಿಗೆ ಪೂಜ್ಯಳಾದ ವಾಸವದತ್ತಾದೇವಿಯ ಗುಣಗಳು ನೆನಪಿಗೆ ಬರಲು, ಅದರಿಂದ ದುಃಖಾವಿಷ್ಟನಾಗಿರಬಹುದು. ಆ ವಿಚಾರವನ್ನು ಕುರಿತು ನನ್ನ ಮುಂದೆ ಪ್ರಸ್ತಾವಿಸುವುದು ಸರಿಯಲ್ಲವೆಂದು ತಿಳಿದು, ಹೇಗೋ ಆ ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಮಾತಾಡದೆ ಸುಮ್ಮನಿದ್ದನೆಂದು ನಾನು ಊಹಿಸುವೆನು.

ವಾಸವದತ್ತೆ—(ಸ್ವಗತಂ) ಇದು ನಿಜವಾಗಿದ್ದರೆ ನಾನಲ್ಲವೇ ಧನ್ಯಳು?

(ಇಷ್ಟರಲ್ಲಿ ವತ್ಸರಾಜನು ವಿದೂಷಕನೊಡನೆ ಪ್ರವೇಶಿಸುವನು.)

ವಿದೂ— ಹಿ! ಹಿ! ಹಿ! ಹಿ! ಸಮೃದ್ಧವಾಗಿ ಉದಿರಿ ಬಿದ್ದಿರುವ ಬಂದುಗೆಯ ಪುಷ್ಪಗಳಿಂದ ಈ ವನಭೂಮಿಯು ಎಷ್ಟು ವಿಚಿತ್ರವಾಗಿ ಕಾಣುತ್ತಿರುವುದು! ಮಹಾರಾಜನೆ! ಇತ್ತ ದಯೆಮಾಡಿಸಬೇಕು!

ರಾಜಂ— ಮಿತ್ರವಸಂತಕಾ! ಇದೋ! ಬರುತ್ತಲೇ ಇರುವೆನಷ್ಟೆ? ಅದಿರಲಿ! ಮಿತ್ರನೆ!

ಅಂಡಾನುಜ್ಞಯಿನೀಪುರಕ್ಕೆ ಪಯಣಂಗೆಯ್ವಲ್ಲಿ ಭೂಭೃತ್ಸುತಾ ।
ಸೌಂದರ್ಯಾಹೃತಚಿತ್ತನಾದ ಪದದೊಳ್ ತನ್ನೈದುಬಾಣಂಗಳಿಂ ॥
ಕಂದರ್ಪಂ ಬಿಡದೆಚ್ಚುದೆನ್ನೆರ್ದೆಯೊಳಿನ್ನುಂ ನಾಂಟಿರಲ್ಕೀಗಳಿ ।
ನ್ನೊಂದಂಬಂ ಮಗುಳ್ಚೆಚ್ಚನೆಂತೊದವಿತೋ ಪಂಚೇಷುಗಾರಂಬುಗಳ್!

ವಿದೂ— ಪೂಜ್ಯಳಾದ ಪದ್ಮಾವತಿಯು ಈಗ ಎಲ್ಲಿರಬಹುದು? ಒಂದು ವೇಳೆ ಲತಾಮಂಟಪಕ್ಕೆ ಹೋಗಿರಬಹುದು. ಅಲ್ಲದಿದ್ದರೆ, ಅಲ್ಲಲ್ಲಿ

ವಿಶೇಷವಾಗಿ ಉದಿರಿ ಬಿದ್ದ ಚಂಪುಗೆ ಹೂಗಳಿಂದ ಹುಲಿಯ ಚರ್ಮವನ್ನು ಹಾಸಿದಂತೆ ಕಾಣಿಸುವ "ಪರ್ವತತಿಲಕ" ವೆಂಬ ಕಲ್ಲುಬಂಡೆಯ ಬಳಿಗೆ ಹೋಗಿರಬಹುದು! ಅಥವಾ ಬಹಳ ಒಗರು ವಾಸನೆಯುಳ್ಳ ಏಳಿಲೆ ಬಾಳೆಯ ತೋಟಕ್ಕೆ ಹೋಗಿದ್ದರೂ ಇರಬಹುದು. ಅದೂ ಇಲ್ಲದಿದ್ದರೆ, ನಾನಾಜಾತಿಯ ಮೃಗಪಕ್ಷಿಗಳ ಆಕೃತಿಗಳಿಂದ ಚಿತ್ರಿಸಲ್ಪಟ್ಟಿರುವ "ದಾರುಪರ್ವತ" ವೆಂಬ ಕೃತ್ರಿಮವಾದ ಮರದ ಗುಡ್ಡದ ಮೇಲೆ ಏರಿ ಕುಳಿತಿರಬಹುದು. (ಮೇಲೆ ನೋಡಿ ಸಂತೋಷದಿಂದ) ಹಿ! ಹಿ! ಹಿ! ಹಿ! ಮಿತ್ರನೆ! ನೋಡು! ಅದೋ ಮೇಲೆ ನೋಡಿದೆಯಾ! ಶರತ್ಕಾಲ ನಿರ್ಮಲವಾದ ಆಕಾಶದಲ್ಲಿ ಉದ್ದಕ್ಕೆ ನೀಡಿದ ಬಲದೇವನ ಬಾಹುದಂಡದಂತೆ ದರ್ಶನೀಯವಾಗಿ ಈ ಸಾರಸಪಕ್ಷಿಗಳು ಸಾಲಾಗಿ ಹಾರುತ್ತಿರುವವು ನೋಡು!

ರಾಜಂ— ಮಿತ್ರನೆ! ನಾನೂ ಅದನ್ನೇ ನೋಡುತ್ತಿರುವೆನು. ಕೇಳು—

ಸರಳಂ ದೀರ್ಘಮುಮುನ್ನತಾವನತಮುಂ ಸಪ್ತರ್ಷಿತಾರಾಳಿಯಂ।
ತಿರೆ ವಕ್ರಾಕೃತಿ ದಾರಿಯಂ ತಿರುಗುವಂದೀಸಾರಸಶ್ರೇಣಿ ಮೈ॥
ಪರೆಯುಚ್ಚಿರ್ದ್ದ ಫಣೀಂದ್ರಭೋಗಕೆಣೆವಪ್ಪಿರ್ ನಿರ್ಮಲಾಕಾಶದೊಳ್।
ಕುರುಪಿಟ್ಟಿರ್ದ್ದ ವಿಭಾಗರೇಖೆಯಿದೆ ತಾನೆಂಬಂದದಿಂದೊಪ್ಪುಗುಂ ॥೧೮॥

ಚೇಟಿ— ರಾಜಕುಮಾರೀ! ನೋಡು! ನೋಡು! ನೈದಿಲೆಹೂವಿನ ಮಾಲೆಯಂತೆ ಮನೋಹರವಾದ ಈ ಸಾರಸಪಕ್ಷಿಗಳ ಸಾಲು ಯಥೇಚ್ಛವಾಗಿ ಹಾರಿಹೋಗುತ್ತಿರುವುದು! (ಮುಂದೆ ಹೋಗುತ್ತ) ಓಹೋ! ಮಹಾರಾಜನು!

ಪದ್ಮಾ— ಏನು? ಆರ್ಯಪುತ್ರನೆ! ಹೌದು! ಇಲ್ಲಿಯೇ ಬರುತ್ತಿರುವನು. ಆರ್ಯೆ! ನೀನಿರುವಾಗ, ನಾನು ಇಲ್ಲಿ ಆರ್ಯಪುತ್ರನನ್ನು ಕಾಣಿಸಿಕೊಳ್ಳುವುದು ಸರಿಯಲ್ಲ! ಆದುದರಿಂದ ನಿನಗಾಗಿ ನಾನೂ ಮರೆಸಿಕೊಳ್ಳುವೆನು. ಇದೋ! ಈ ಮಾಧವೀ ಮಂಟಪದೊಳಕ್ಕೆ ಹೋಗುವೆವೇ?

ವಾಸವದತ್ತೆ— ಸರಿ. ಹಾಗೆಯೇ ಆಗಲಿ. (ಇಬ್ಬರೂ ಹೋಗುವರು)

ವಿದೂ— ಪೂಜ್ಯಳಾದ ಪದ್ಮಾವತಿಯು ಇಲ್ಲಿಗೆ ಬಂದು ಹೋಗಿರಬಹುದು.

ರಾಜ— ನೀನು ಹೇಗೆ ಬಲ್ಲೆ?

ವಿದೂ— ಇದೋ ಈ ಶೇಫಾಲಿಕಾ ಲತೆಯ ಕುಡಿಗಳನ್ನು ನೋಡು. ಇದರಲ್ಲಿ ಹೂಗಳನ್ನು ಕುಯ್ದಂತಿದೆ.

ರಾಜ— ಆಹಾ! ಏನೀಪುಷ್ಪಗಳ ವೈಚಿತ್ರ್ಯವು! ವಸಂತಕ!

ವಾಸವದತ್ತೆ— (ಸ್ವಗತಂ) ಈ ವಸಂತಕ ಶಬ್ದೋಚ್ಚಾರಣದಿಂದ ಈಗ ನಾನು ತಿರುಗಿ ಉಜ್ಜಯಿನಿಯಲ್ಲಿಯೇ ಇರುವ ಹಾಗೆ ಭಾವಿಸುವೆನು.

ರಾಜ— ವಸಂತಕ! ಈ ಶಿಲಾತಲದಲ್ಲಿಯೇ ಕುಳಿತು ಪದ್ಮಾವತೀದೇವಿಯನ್ನು ನಿರೀಕ್ಷಿಸುವೆವು.

ವಿದೂ— ಹಾಗೆಯೇ ಆಗಲಿ. (ಕುಳಿತು ಒಡನೆಯೇ ಮೇಲೆದ್ದು) ಅಬ್ಬಬ್ಬ! ಈ ಶರತ್ಕಾಲದ ಬಿಸಲಿನ ತಾಪದಿಂದ ಕಲ್ಲು ಬಹಳವಾಗಿ ಕಾದಿರುವುದು. ಆದುದರಿಂದ ಇದೋ ಇಲ್ಲಿ ಕಾಣುವ ಮಾಧವೀಮಂಟಪವನ್ನು ಪ್ರವೇಶಿಸುವೆವು.

ರಾಜ— ಒಳ್ಳೆಯದು. ಮುಂದೆ ನಡೆ!

ವಿದೂ— ಸರಿ. ಹಾಗೆಯೇ ಆಗಲಿ. (ಇಬ್ಬರೂ ಮುಂದೆ ಬರುವರು.)

ಪದ್ಮಾ— ಅಯ್ಯೋ! ಇನ್ನೇನು ಗತಿ! ಈ ಆರ್ಯವಸಂತಕನು ಯಾವ ಭಾಗದಲ್ಲಿಯೂ ಸಿಕ್ಕನ್ನೇ ತಂದಿಡುವನಲ್ಲ! ಈಗೇನು ಮಾಡುವುದು?

ಚೇಟಿ— ರಾಜಕುಮಾರಿ! ದುಂಬಿಗಳಿಂದ ತುಂಬಿ ತೂಗಾಡುತ್ತಿರುವ ಈ ಬಳ್ಳಿಯನ್ನು ಆಡಿಸಿ, ಭ್ರಮರಗಳನ್ನೆಬ್ಬಿಸುವುದರಿಂದ ಈಗ ರಾಜನು ಒಳಕ್ಕೆ ಬಾರದಂತೆ ಮಾಡಿಬಿಡಲೇನು?

ಪದ್ಮಾ— ಸರಿ! ಹಾಗೆಯೇ ಮಾಡು. ಒಳ್ಳೆಯ ಉಪಾಯವೇ.

(ಚೇಟಿಯು ಹಾಗೆ ಮಾಡುವಳು)

ವಿದೂ— ಅಯ್ಯೋ! ಕೆಟ್ಟೆನು! ಮಿತ್ರನೇ, ನಿಲ್ಲು! ನಿಲ್ಲು!

ರಾಜಂ— ಏಕೆ?

ವಿದೂ— ಈ ಹಾಳುದುಂಬಿಗಳು—ತೊತ್ತಿನ ಮಕ್ಕಳು—ಮೇಲೆಬಿದ್ದು ಪೀಡಿಸುವುವು!

ರಾಜಂ— ಮಿತ್ರನೆ! ಇರಲಿ! ಹೆದರಬೇಡ! ಹೆದರಬೇಡ! ಈಗ ನಾವು ಈ ದುಂಬಿಗಳನ್ನು ಹೆದರಿಸಿ ಓಡಿಸುವುದು ಸರಿಯಲ್ಲ! ನೋಡು.

ಮದಿಸಿ ಮಧುಪಾನದಿಂ ಮೋ |
ದದಿನಪ್ರಿಯಸತಿಯರೊಡನೆ ನಲಿವಳಿಗಳ್ ನಾಂ ॥
ಪದವಿಡಲಂಜುತುಮೆಮ್ಮಂ
ದದೆ ನಿಜದಯಿತಾವಿಯೋಗಮೊಂದುಗುಮಲ್ತೇ ॥೧೯॥

ಆದುದರಿಂದ ನಾವು ಇಲ್ಲಿಯೇ ಹೊರಗೆ ನಿಲ್ಲುವೆವು.

ವಿದೂ— ಆಗಲಿ. (ಇಬ್ಬರೂ ಕುಳ್ಳಿರುವರು.)

ಚೇಟಿ— ರಾಜಪುತ್ರಿ! ಈಗ ನಾವು ಒಳಗೆ ಸಿಕ್ಕಿಬಿದ್ದೆವಲ್ಲಾ! ಏನು ಮಾಡುವುದು?

ಪದ್ಮಾ— ಅದೃಷ್ಟವಶದಿಂದ ಆರ್ಯಪುತ್ರನು (ಒಳಕ್ಕೆ ಬಾರದೆ) ಅಲ್ಲಿಯೇ ಕುಳಿತನು.

ವಾಸವದತ್ತೆ— (ರಾಜನನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಸ್ವಗತಂ) ದೈವಯೋ ಗದಿಂದ ಆರ್ಯಪುತ್ರನ ದೇಹವು ಸ್ವಲ್ಪವಾದರೂ ಕಂದಿಲ್ಲ ಸಹಜಸ್ಥಿತಿಯಲ್ಲಿರುವುದು.

ಚೇಟಿ— ರಾಜಪುತ್ರಿ! ನೋಡು! ನೋಡು! ಇದೇನು! ಈ ಪೂಜ್ಯಳ ಕಣ್ಣೀರು ಬಿಡುತ್ತಿರುವಳು ಕಾರಣವೇನಿರಬಹುದು!

ವಾಸ— ಸಖಿ! ಮತ್ತೇನೂ ಇಲ್ಲ. ಈ ಹಾಳುದುಂಬಿಗಳ ಹಾರಾಟ ಸಂಭ್ರಮದಿಂದ ಕಾಶಪುಷ್ಪಗಳು ಕದಲಿ ಅದರ ಪರಾಗಗಳ ನನ್ನ ಕಣ್ಣಿಗೆ ಬಿದ್ದುದರಿಂದ ಕಣ್ಣೀರು ಬಂದಿತು.





ಪದ್ಮಾ— ಇರಬಹುದು.

ವಿದೂ— ಈಗ ಈ ಉದ್ಯಾನದಲ್ಲಿ ಬೇರೆ ಯಾರೂ ಇಲ್ಲ. ರಹಸ್ಯವಾಗಿ ನಿನ್ನನ್ನು ಕೇಳಬೇಕಾದ ಒಂದು ಸಂಗತಿಯುಂಟು. ಕೇಳಲೆ?

ರಾಜಂ— ಅದಕ್ಕೆ ತಡೆಯೇನು? ಧಾರಾಳವಾಗಿ ಕೇಳಬಹುದು.

ವಿದೂ— ನಿನಗೆ ಯಾರಲ್ಲಿ ಹೆಚ್ಚಿನ ಪ್ರೀತಿ? ಆಗಿನ ವಾಸವದತ್ತೆಯಲ್ಲಿಯೆ? ಈಗಿನ ಪದ್ಮಾವತಿಯಲ್ಲಿಯೆ?

ರಾಜಂ— ನೀನು ಒಳ್ಳೇ ಧರ್ಮಸಂಕಟದಲ್ಲಿ ನನ್ನನ್ನು ತಂದು ಸಿಕ್ಕಿಸಿ ಡುವೆಯಲ್ಲ!

ಪದ್ಮಾ— ಸಖೀ! ರಾಜನು ಈಗ ಎಂತಹ ತೊಡಕಿನಲ್ಲಿ ಸಿಕ್ಕಿಬಿದ್ದಿರು ವನು ನೋಡು!

ವಾಸವದತ್ತೆ— (ಸ್ವಗತಂ) ಮಂದಭಾಗಿನಿಯಾದ ನಾನೂ ಈಗ ಅದೇ ಅವಸ್ಥೆಯಲ್ಲಿ ಸಿಕ್ಕಿರುವೆನು. ಆರ್ಯಪುತ್ರನು ಏನೆನ್ನುವನೋ!

ವಿದೂ— ಮಿತ್ರನೆ! ಸಂಕೋಚವೇಕೆ? ಮನಸ್ಸನ್ನು ಧಾರಾಳವಾಗಿ ಬಿಚ್ಚಿ ಹೇಳು; ಭಯಕ್ಕೆ ಕಾರಣವಿಲ್ಲ. ಒಬ್ಬಳಂತೂ ಆಗಲೇ ಮೃತ ಳಾದಳು! ಮತ್ತೊಬ್ಬಳೇನೋ ಇಲ್ಲಿಲ್ಲ.

ರಾಜಂ— ಇಲ್ಲ! ಇಲ್ಲ! ನಾನು ನಿನ್ನಲ್ಲಿ ಮಾತ್ರ ಖಂಡಿತವಾಗಿ ಹೇಳು ವುದಿಲ್ಲ. ನೀನು ಬಹಳ ಬಾಯಾಳಿ!

ಪದ್ಮಾ— ಇನ್ನೇನು? ಇದರಿಂದಲೇ ಹೇಳಿದಂತಾಯಿತು!

ವಿದೂ— ಮಿತ್ರನೆ! ನನ್ನಾಣೆಗೂ ಬೇರೊಬ್ಬರೊಡನೆ ನಾನು ಬಾಯಿತ್ತು ವುದಿಲ್ಲ. ಇದೋ! ನಾಲಗೆಯನ್ನು ಕಚ್ಚಿಕೊಂಡಿರುವೆನು.

ರಾಜಂ— ಹೇಳುವುದಕ್ಕೆ ನನಗೆ ಮನಸ್ಸಿಲ್ಲ.

ಪದ್ಮಾ— ಆಹಾ, ಇವನು ಎಷ್ಟು ಕಿರುಕುಳದ ಸ್ವಭಾವದವನು! ಇಷ್ಟ ರಿಂದಲೇ ಆರ್ಯಪುತ್ರನ ಹೃದಯವನ್ನು ತಿಳಿದುಕೊಳ್ಳಲಾರದೆ ಹೋದನೇ?

ವಿದೂ— ಮಹಾರಾಜನೆ! ನೀನು ನನಗೆ ಹೇಳುವುದಿಲ್ಲವಷ್ಟೆ? ಹಾಗಿದ್ದರೆ ಈ ಶಿಲಾತಲದಿಂದ ನೀನು ಮುಂದೆ ಒಂದು ಹೆಜ್ಜೆಯನ್ನು ಇಡಲಾರೆ. ಇಲ್ಲಿಯೇ ನಿನ್ನನ್ನು ತಡೆದುಬಿಡುವೆನು.

ರಾಜಂ— ಏನು? ಬಲಾತ್ಕಾರದಿಂದಲೇ ?

ವಿದೂ— ಹೌದು! ಬಲಾತ್ಕಾರದಿಂದ!

ರಾಜಂ— ಹಾಗಾದರೆ ನೋಡುವೆನು!

ವಿದೂ— ಮಿತ್ರನೆ! ಪ್ರಸನ್ನನಾಗು! ಪ್ರಸನ್ನನಾಗು! ನೀನು ನಿಜವನ್ನು ಹೇಳದಿದ್ದರೆ ನಮ್ಮ ಸ್ನೇಹದ ಮೇಲಾಣೆ!

ರಾಜಂ— ಇನ್ನೇನು ಗತಿ! ಹೇಳದೆ ವಿಧಿಯಿಲ್ಲ! ಮಿತ್ರನೆ ಕೇಳು!

ಎನಗಭಿಮತೆ ಪದ್ಮಾವತಿ।
ಯನುಪಮಗುಣರೂಪವಿಭವದಿಂದಾದೊಡೆ ಮ॥
ನ್ಮನಮಂ ವಾಸ್ತವದತ್ತೆಯೊ।
ಳನುಲಗ್ನಮನೆಳೆಯಲಾಕೆಗಸವಳಮಲ್ತೇ ॥೨೦॥

ವಾಸವದತ್ತೆ— (ಸ್ವಗತಂ) ಒಳ್ಳೆಯದು! ನನ್ನ ಕಷ್ಟಕ್ಕೆ ಬಹುಮಾನವು ಈಗ ಲಭಿಸಿದಂತಾಯಿತು. ಈ ಅಜ್ಞಾತವಾಸದಲ್ಲಿಯೂ ಎಷ್ಟೋ ಗುಣವುಂಟು.

ಚೇಟಿ— ರಾಜಪುತ್ರೀ! ನೋಡಿದೆಯಾ ನಿನ್ನ ಕಾಂತನು ಎಷ್ಟು ನಿರ್ದಯನು?

ಪದ್ಮಾ— ಸಖಿ! ಛೀ! ಛೀ! ಹಾಗೆ ಎಣಿಸಬೇಡ. ಈಗಲೂ ಆ ವಾಸವದತ್ತೆಯಲ್ಲಿ ಇಷ್ಟೊಂದು ಪ್ರೀತಿಯನ್ನಿಟ್ಟು, ಆಕೆಯ ಗುಣಗಳನ್ನು ಪ್ರಶಂಸೆ ಮಾಡುತ್ತಿರುವ ಆರ್ಯಪುತ್ರನನ್ನು ನಿರ್ದಯನೆಂದು ಹೇಗೆ ಹೇಳಬಹುದು? ಅವನೇನೋ ಬಹಳ ದಯಾಳುವೇ!

ಚೇಟಿ— ರಾಜಕುಮಾರೀ! ನಿನ್ನ ವಂಶಗೌರವಕ್ಕೆ ತಕ್ಕ ಮಾತನ್ನೇ ಆಡುವೆ!

ರಾಜಂ— ಮಿತ್ರ! ನಾನೇನೋ ನನ್ನ ಅಂತರಂಗವನ್ನು ತಿಳಿಸಿಬಿಟ್ಟೆನು. ಈಗ ನೀನು ಹೇಳು. ನೀನು ಯಾರನ್ನು ಮೆಚ್ಚುವೆ? ಆಗಿನ ವಾಸವದತ್ತೆಯನ್ನೋ? ಈಗಿನ ಪದ್ಮಾವತಿಯನ್ನೋ?

ಪದ್ಮಾ— ಓಹೋ! ಈಗ ಆರ್ಯಪುತ್ರನು ವಸಂತಕನ ಹಾಗೆ ತಿರುಗಿ ಬಿಟ್ಟನು.

ವಿದೂ— ಮಿತ್ರನೆ! ನನ್ನ ಹರಟೆಯನ್ನು ಕೇಳಿ ನಿನಗಾಗುವುದೇನು? ನನಗೆ ಅವರಿಬ್ಬರಲ್ಲಿಯೂ ಒಂದೇ ವಿಧವಾದ ಬಹುಮಾನವುಂಟು.

ರಾಜಂ— ಛೀ ಮೂರ್ಖ! ಮೊದಲು ನನ್ನನ್ನು ಅಷ್ಟು ನಿರ್ಬಂಧಿಸಿ ನನ್ನ ಬಾಯಿಂದಾಡಿಸಿ ಬಿಟ್ಟು, ಈಗ ನೀನು ಮಾತ್ರ ಸರಿಯಾದ ಉತ್ತರವನ್ನು ಹೇಳದಿರುವೆಯಾ?

ವಿದೂ— ಹಾಗಿದ್ದರೆ ನೀನೂ ನನ್ನನ್ನು ಬಲಾತ್ಕರಿಸುವೆಯೇನು?

ರಾಜಂ— ಹೌದು! ಬಲಾತ್ಕರಿಸದೆ ಬಿಡುವೆನೆ?

ವಿದೂ— ಹಾಗಿದ್ದರೆ ನನ್ನಿಂದ ನೀನು ಕೇಳಲಾರೆ.

ರಾಜಂ— ಮನ್ನಿಸು! ಮನ್ನಿಸು! ಮಹಾಬ್ರಾಹ್ಮಣಾ! ಮನ್ನಿಸು! ನಿರ್ಭಯವಾಗಿ ನಿನ್ನ ಅಂತರಂಗವನ್ನು ನನಗೆ ತಿಳಿಸು.

ವಿದೂ— ಹಾಗಿದ್ದರೆ ಕೇಳು! ಪೂಜ್ಯಳಾದ ವಾಸವದತ್ತೆಯೇನೋ ನನಗೆ ಬಹಳ ಇಷ್ಟಳು. ಪೂಜ್ಯಳಾದ ಪದ್ಮಾವತಿಯೂ ಒಳ್ಳೇ ಯುವತಿ! ರೂಪವತಿ! ಅವಳಿಗೆ ಕೋಪವಿಲ್ಲ! ಅಹಂಕಾರವಿಲ್ಲ! ಯಾವಾಗಲೂ ಪ್ರಿಯವನ್ನೇ ನುಡಿಯತಕ್ಕವಳು. ಬಹಳ ದಾಕ್ಷಿಣ್ಯಪ್ರಕೃತಿ*! ಎಲ್ಲಕ್ಕಿಂತಲೂ ಮೇಲೆ ಮತ್ತೊಂದು ವಿಶೇಷಗುಣವೇ

---

* ಇಲ್ಲಿ ವಿದೂಷಕನು ತನಗೆ ಹೆಚ್ಚಾಗಿ ಭೋಜನವನ್ನಿಕ್ಕುವ ಗುಣಾತಿಶಯವನ್ನು ಪದ್ಮಾವತಿಯಲ್ಲಿಯೇ ಆರೋಪಿಸಿದಂತೆ ಅರ್ಥಭೇದವನ್ನಿಟ್ಟುಕೊಂಡರೆ, ಅವರ ಮುಂದಿನ ಸಂಭಾಷಣೆಗಳಲ್ಲಿರುವ ಅಭಿಪ್ರಾಯವು ಇನ್ನೂ ಚನ್ನಾಗಿ ಹೊಂದಿಬರುವುದೆಂದು ತೋರುವುದು. ಆಗ ಮುಂದಿನ ವಾಕ್ಯಗಳಿಗೆ ಈ ಕೆಳಗೆ ಕಂಡ ಅರ್ಥಭೇದವನ್ನು ಗ್ರಹಿಸಬೇಕು. ಹೇಗೆಂದರೆ

ನೆಂದರೆ, ಒಳ್ಳೇ ರಸವತ್ತಾದ ಭೋಜನಗಳಿದ್ದಾಗ ವಾಸವದ
ತ್ತೆಯು "ಆರ್ಯವಸಂತಕನೆಲ್ಲಿ!" ಎಂದು ನನ್ನನ್ನು ಹುಡುಕಿ
ಕೊಂಡು ಬರುವಳು.

ವಾಸವದತ್ತೆ— ಒಳ್ಳೆಯದು! ವಸಂತಕಾ. ಈಗ ನನ್ನನ್ನು ನೆನಪಿನಲ್ಲಿಡು!

ರಾಜಂ— ವಸಂತಕಾ! ಒಳ್ಳೆಯದೊಳ್ಳೆಯದು! ಇದನ್ನೆಲ್ಲಾ ನಾನು
ವಾಸವದತ್ತಾದೇವಿಗೆ ತಿಳಿಸುವೆನು.

ವಿದೂ— ಅಯ್ಯೋ! ವಾಸವದತ್ತೆ! ಇನ್ನು ವಾಸವದತ್ತೆಯೆಲ್ಲಿರುವಳು! ವಾಸ
ವದತ್ತೆಯು ಸತ್ತು ಎಷ್ಟು ಕಾಲವಾಯಿತು!

ರಾಜಂ— (ವ್ಯಸನದೊಡನೆ) ಮಿತ್ರನೆ! ಹೌದು! ನಿಜವಾಗಿಯೂ ವಾಸವ
ದತ್ತೆಯು ಯಾವಾಗಲೋ ಮೃತಳಾದಳು. ಆದರೆ—

ನಿನ್ನಯ ಹಾಸ್ಯೋಕ್ತಿಗಳಿಂ ।
ದೆನ್ನಮನಂ ಕಲಗಿ ಮೋಹಗೊಂಡಿದ್ದುದರಿಂ ॥
ಮುನ್ನಿನ ಬಳಕೆಯೊಳೇನುಡಿ ।
ತನ್ನಿಂ ತಾನೊಗೆಯುವೆನ್ನ ವದನದಿನೀಗಳ್ ॥೨೧॥

ಪದ್ಮಾ— ಆಹಾ! ಒಳ್ಳೆಯ ಪ್ರಿಯವಾದ ಮಾತುಗಳು ನಡೆಯುತಿದ್ದಾಗ
ಕೇಡಿಗನಾದ ಈ ವಸಂತಕನು ನಡುವೆ ಏನೋ ಅಪ್ರಿಯಮಾತನ್ನು
ತಂದೊಡ್ಡಿದನು.

ವಾಸವದತ್ತೆ— (ತನ್ನಲ್ಲಿ ತಾನು) ಒಳ್ಳೆಯದಿರಲಿ! ಈಗ ಮನಸ್ಸಿಗೆ ನೆಮ್ಮದಿ
ಯಾಯಿತು! ಪರೋಕ್ಷದಲ್ಲಿಯೂ ಆರ್ಯಪುತ್ರನ ಬಾಯಿಂದ
ಇಂತಹ ಮಾತುಗಳನ್ನು ಕೇಳುವುದು ನನಗೆ ಎಷ್ಟೋ ಪ್ರಿಯವು!

---

ವಾಸವ— ಇರಲಿ! ಇರಲಿ! ವಸಂತಕಾ! ಇದನ್ನು (ನನ್ನ ಮೇಲಿನ ಈ ದೋಷಾರೋ
ಪಣೆಯನ್ನು) ನೀನು ನೆನಪಿನಲ್ಲಿಟ್ಟಿರು.

ರಾಜಂ— ವಸಂತಕಾ! ಒಳ್ಳೇದಿರಲಿ! ಇದನ್ನೆಲ್ಲಾ ನಾನು ವಾಸವದತ್ತೆಗೆ ತಿಳಿಸದೆ ಬಿಡು
ವನೆ!

(ಹೀಗೆ ಇಬ್ಬರೂ ವಸಂತಕನನ್ನು ಹೆದರಿಸುವ ಹಾಗೆ ನುಡಿಸಬೇಕು.)

ವಿದೂ— ಮಿತ್ರನೆ! ಸೈರಿಸು! ದುಃಖವನ್ನು ತಡೆದುಕೊಳ್ಳಬೇಕು. ವಿಧಿಯೋಗವನ್ನು ಮೀರುವುದಕ್ಕಾದೀತೇ? ಇದು ಹೀಗಾಗಬೇಕಾಗಿದ್ದಿತು; ಯಾರೇನು ಮಾಡಬಲ್ಲರು?

ರಾಜಂ— ಮಿತ್ರನೆ! ಈಗ ನಾನು ಅನುಭವಿಸುವ ಅವಸ್ಥೆಯನ್ನು ನೀನು ಕಾಣೆ! ಏಕೆಂದರೆ, ಕೇಳು—

* ಮನದನುರಾಗಮೆಂಬ ಲತೆ ಬೇರಿಳಿಯಲ್ ಕಳೆಯಲ್ಕೆ ಸಾಧ್ಯಮೇ।
ನೆನೆನೆನೆದಂತೆ ದುಃಖಮುದೆ ತಾಂ ಪೊಸತಪ್ಪುದು ಮೇಲೆಮೇಲೆ ಕ।
ಣ್ಣಿನಿಗರೆಯಲ್ಕದೊಂದೆಯುಪಶಾಂತಿ ಮನಕ್ಕದರಿಂದೆ ಬುದ್ಧಿ ತಾ।
ನನ್ನಜತೆಯಾಂತು ನಾಡೆ ತಿಳಿವೊಂದುಗುಮೆಂತಿದೆ ಲೋಕರೀತಿ ಕೇಳ್ ॥

ವಿದೂ— ಮಿತ್ರನೆ! ಕಣ್ಣೀರಿಂದ ತೊಯ್ದು ನಿನ್ನ ಮುಖವು ಕಂದಿರುವುದು. ಇದೋ ಮುಖವನ್ನು ತೊಳೆಯುವುದಕ್ಕೆ ನೀರನ್ನು ತರುವೆನು.

(ಹೋಗುವನು)

ಪದ್ಮಾ— ಅಯ್ಯೋ! ಕಾಂತನ ಕಣ್ಣುಗಳಲ್ಲಿ ನೀರು ತುಂಬಿ ಕೈವಸ್ತ್ರವನ್ನು ಮುಖಕ್ಕೆ ಮರೆಮಾಡಿಕೊಂಡಿರುವನು. ನಾವು ಅವನ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡು ಹೋಗುವುದಕ್ಕೆ ಇದೇ ಸಮಯವು. ಬಾ ಹೋಗುವೆವು.

ವಾಸವದತ್ತೆ— ಆಗಲಿ. ಅಥವಾ ನೀನು ಇಲ್ಲಿರು. ಈ ವ್ಯಸನಸಮಯದಲ್ಲಿ ಕಾಂತನನ್ನು ಬಿಟ್ಟು ಹೋಗುವುದು ಸರಿಯಲ್ಲ. ನಾನು ಮಾತ್ರ ಹೋಗುವೆನು.

---

* ಮೂಲದಲ್ಲಿ "ದುಃಖಂ ತ್ಯಕ್ತುಂ ಬದ್ಧಮೂಲೋಽನುರಾಗಃ" ಎಂದಿದೆ. ಇದಕ್ಕೆ ಕೆಲವು ವ್ಯಾಖ್ಯಾನಗಳಲ್ಲಿ "ಹಳೆಯ ದುಃಖವನ್ನು ಮರೆಯಿಸುವುದಕ್ಕಾಗಿ ಹೊಸ ಕನ್ಯೆಯಲ್ಲಿ ದೃಢವಾದ ಅನುರಾಗವನ್ನು ಹಿಡಿದುದಾಯಿತು" ಎಂದು ಕೊಟ್ಟಿದೆ. ಅದಕ್ಕನುಸಾರವಾಗಿ ಈ ಕೆಳಗಣ ಪಾಠವನ್ನು ಓದಬಹುದು.

ಮನದನುತಾಪಮಂ ಕಳೆಯಲನ್ಯೆಯೊಳಾನನುರಾಗಮಾಂತೆನಿದಂ ।
ನೆನೆನೆನೆದೆನ್ನ ಮುನ್ನಿನಳಲಂ ವ್ಯಸನಂ ಪೊಸತಪ್ಪುದಲ್ತೆ ಕ ॥
ಣ್ಣಿನಿಗರೆಯಲ್ಕದೊಂದೆಯುಪಶಾಂತಿ ಮನಕ್ಕದರಿಂದೆ ಬುದ್ಧಿ ತಾ ।
ನನ್ನಜತೆಯಾಂತು ನಾಡೆ ತಿಳಿವೊಂದುಗುಮೆಂತಿದೆ ಲೋಕರೀತಿ ಕೇಳ್ ॥೨೨॥

ಚೇಟಿ— ಹೌದು. ಈಕೆ ಹೇಳುವುದು ನ್ಯಾಯವು. ನೀನು ಸಮೀಪಕ್ಕೆ
ಹೋಗಿ ನಿನ್ನ ಪ್ರಿಯನನ್ನು ಸಂತೈಸು.

ಪದ್ಮಾ— ಹಾಗಿದ್ದರೆ ನಾನು ಹೋಗಲೇ?

ವಾಸವದತ್ತೆ— ನಡೆ, ನಡೆ. (ಎಂದು ಹೇಳಿ ಹೊರಟು ಹೋಗುವಳು.)

(ವಿದೂಷಕನು ತಾವರೆಯೆಲೆಯಲ್ಲಿ ನೀರನ್ನು ತುಂಬಿ ತಂದು)

ವಿದೂ— ಓಹೋ! ಪೂಜ್ಯಳಾದ ಪದ್ಮಾವತಿ ಇಲ್ಲಿಯೇ ಇರುವಳು!

ಪದ್ಮಾ— ಆರ್ಯ ವಸಂತಕ! ಇದೇನು?

ವಿದೂ— ಮತ್ತೇನು? ಅದೇ ಇದು! ಇದೇ ಅದು!

ಪದ್ಮಾ— ಆರ್ಯನೆ! ಹೇಳು ಹೇಳು! ಅದೇನು ಹೇಳು!

ವಿದೂ— ಪೂಜ್ಯಳೇ! ಈ ನಮ್ಮ ಮಹಾರಾಜನ ಕಣ್ಣಿಗೆ ಕಾಶಪುಷ್ಪದ
ಧೂಳುಬಿದ್ದು ಕಣ್ಣಲ್ಲಿ ನೀರು ಸುರಿಯಿತು. ಮುಖವನ್ನು ತೊಳೆ
ಯುವುದಕ್ಕಾಗಿ ಈ ನೀರನ್ನು ತಂದೆನು. ಇದೋ! ಇದನ್ನು
ನೀನೇ ತಗೆದುಕೊಂಡುಹೋಗಿ ಕೊಡು.

ಪದ್ಮಾ— (ತನ್ನಲ್ಲಿ) ಆಹಾ! ರಾಜನ ಸುಗುಣಗಳೇ ಪರಿಜನಕ್ಕೂ ಬರು
ವುವು. (ಮುಂದೆ ಹೋಗಿ) ಆರ್ಯಪುತ್ರನಿಗೆ ಜಯವಾಗಲಿ. ಇದೋ
ಮುಖವನ್ನು ತೊಳೆದುಕೊಳ್ಳುವುದಕ್ಕೆ ನೀರು.

ರಾಜಂ— (ನೋಡಿ ವಿಸ್ಮಯದಿಂದ) ಓಹೋ! ಪದ್ಮಾವತಿ! (ಮರೆಯಾಗಿ
ವಸಂತಕ! ಏನಿದು!

ವಿದೂ— (ರಾಜನ ಕಿವಿಯಲ್ಲಿ) ..........ಇಷ್ಟೇ.

ರಾಜಂ— ಭಲೇ, ವಸಂತಕ, ಭಲೇ! (ಬಾಯನ್ನು ತೊಳೆದುಕೊಂಡು) ಪದ್ಮಾ
ವತಿ! ಇಲ್ಲಿ ಕುಳ್ಳಿರು.

ಪದ್ಮಾ— ಆರ್ಯಪುತ್ರನ ಆಜ್ಞೆ. (ಕುಳಿತುಕೊಳ್ಳುವಳು.)

ರಾಜಂ— ಪದ್ಮಾವತಿ,

ವನಿತಾಮಣಿ! ಶಾರದಚಂ।
ದ್ರನ ರುಚಿಯುಂ ಪೋಲ್ವ ಕಾಶಕುಸುಮಪರಾಗಂ ।

ಅನಿಲಾಹೃತಮೆನ್ನ ವಿಲೋ।
ಚನದೊಳ್ ಬಿಳ್ದುದರಿನೆನಗೆ ಬಂದುದು ಬಾಷ್ಪಂ ॥೨೩॥

(ತನ್ನಲ್ಲಿ)

ಆರಯೆ ಸಪ್ರೋಢೆಯಿನಾಸುಕು।
ಪಾರಿ! ದಿಟಂ ನುಡಿಯೆ ನಾಡೆ ನೊಂದಪಳದರಿಂ॥
ಧೀರೆಯಿವಳೆನಿಸಿದೊಡವೇಂ।
ನಾರಿಯರೆಂದುಂ ಸ್ವಭಾವಭೀರುಗಳತ್ತೇ? ॥೨೪॥

ದೂ—ಪದ್ಧತಿಯ ಮೇರೆಗೆ ಮಗಧರಾಜನು ನಿನ್ನನ್ನು ಮುಂದಿಟ್ಟುಕೊಂಡು ಹೋಗಿ ತನ್ನ ಬಂಧುಮಿತ್ರರನ್ನು ನೋಡಿಕೊಂಡು ಬರುವುದಕ್ಕೆ ಈಗ ತಕ್ಕ ಸಮಯವಾಗಿದೆ. ಇದೊ, ಆಗಲೇ ಮಧ್ಯಾಹ್ನವಾಯಿತು. ಏಳು ಹೊರಡುವೆವು. ಸತ್ಕಾರದಿಂದ ಪಡೆದ ಪ್ರತಿಸತ್ಕಾರವು ಮನಸ್ಸಿಗೆ ಹಿತಕರವಾಗುವುದು.

ರಾಜಂ—ಹೌದು, ಮೊದಲು ಇದನ್ನು ನಡೆಯಿಸಬೇಕು. (ಎದ್ದು ನಿಂತು)

ಧೀರಗುಣೋತ್ಕರದಿಂ ಸ।
ತ್ಕಾರದಿನಿತರಜನರನಾದರಿಪ ಮಹೋ॥
ದಾರರ್ ಸುಲಭರ್ ಧರಣಿಯೊ।
ಳಾರಯಲದನರಿವ ಜನಮೆ ದುರ್ಲಭಮತ್ತೇ? ॥೨೫॥

(ಎಲ್ಲರೂ ಹೋಗುವರು.)

ಇದು

## ಚತುರ್ಥಾಂಕಂ

---

# ಕೆಲವು ಸಣ್ಣಕತೆಗಳು.

———— ooo0ooo ————

## ರಂಗನ ಮದುವೆ.

ಈ ಹೆಸರನ್ನೋದಿ "ಇದೇನು? 'ರಂಗನ ಮದುವೆ' ಎನ್ನ 'ರಂಗನಾಥನ ವಿವಾಹ' 'ರಂಗನಾಥ ವಿಜಯ' ಎನ್ನಬಾರದೆ?" ಎಂದ ನೀವಾರಾದರೂ ಕೇಳಬಹುದಲ್ಲವೆ? ಆಹುದು. "ಜಗನ್ನಾಥ ವಿಜಯ "ಗಿರಿಜಾ ಕಲ್ಯಾಣ" ಎನ್ನುವಹಾಗೆ "ಶ್ರೀ ರಂಗನಾಥ ವಿಜಯ." ಅಥವ ಅದರಂತೆ ಇರುವ ಬಾಯಿತುಂಬ ಬರುವ ಒಂದು ಹೆಸರನ್ನು ನಾನ ಇಡಬಹುದಾಗಿತ್ತು. ಅದು ನನಗೆ ತಿಳಿಯದೆ ಇಲ್ಲ. ಆದರೆ, ನೋಡಿರಿ ಇದು ಜಗನ್ನಾಥನ ವಿಜಯವೂ ಅಲ್ಲ; ಗಿರಿಜೆಯ ಕಲ್ಯಾಣವೂ ಅಲ್ಲ ನಮ್ಮೂರಿನ ನಮ್ಮ ರಂಗನ ಮದುವೆಯ ವಿಷಯ. ಆದುದರಿಂದ ರೀತಿಯ ಹೆಸರನ್ನಿಡಲಿಲ್ಲ.

ನಮ್ಮೂರು ಹೊಸಹಳ್ಳಿ. ಅದರ ಹೆಸರನ್ನು ನೀವು ಕೇಳಿರುವಿರಲ್ಲವೇ ಇಲ್ಲವೆ? ಅಯ್ಯೋ ಪಾಪ. ಅದು ನಿಮ್ಮ ತಪ್ಪಲ್ಲ. ಭೂವಿವರಣೆಗಳಲ್ಲಿ ಅವ ಹೆಸರು ಇಲ್ಲ. ಇಂಗ್ಲೆಂಡು ದೇಶದಲ್ಲಿದ್ದುಕೊಂಡು ಇಂಗ್ಲೀಷಿನಲ್ಲಿ ಭೂ ವರಣೆಯನ್ನು ಬರೆಯುವ ಸಾಹೇಬು ಜನಗಳಿಗೆ ಹೊಸಹಳ್ಳಿಯ ಗೊತ್ತಿಲ್ಲದೆ. ಅವರು ಸುಮ್ಮನಿದ್ದರೂ ಇರಬಹುದು. ನಮ್ಮ ಜನ ಭೂವಿವರಣೆಯನ್ನು ಬರೆವಾಗಲೂ ಹೊಸಹಳ್ಳಿಯ ಹೆಸರನ್ನೇ ಮರೆಯ ವರು. ಸರಿ; ಕುರಿಯ ಹಿಂಡಿನ ಸಮಾಚಾರ! ಒಂದು ಹಳ್ಳಕ್ಕೆ ಬಿದ್ದ ಎಲ್ಲವೂ ಒಂದರ ಹಿಂದೆ ಒಂದು ಕಣ್ಣು ತೆರೆದುಕೊಂಡೇ ಬೀಳುವು ಇಂಗ್ಲೆಂಡಿನ ಸಾಹೇಬರೂ ನಮ್ಮ ಗ್ರಂಥಕರ್ತರೂ ಮರೆತಮೇಲೆ, ಪಾ ಭೂಪಠವನ್ನು ಬರೆಯುವವನು ಅದನ್ನು ಬರೆಯುವನೇ? ನಕ್ಷೆಯ ನಮ್ಮೂರಿನ ನೆಲೆಯೇ ಇಲ್ಲ.

ಎಲ್ಲಿಯೋ ಪ್ರಾರಂಭಿಸಿ, ಏನೋ ಹೇಳುತ್ತಾ ಬಂದೆ. ಕ್ಷಮಿಸಿ ಭರತ ವರ್ಷದಲ್ಲಿ ಮೈಸೂರು ದೇಶವು ಔತನ ಊಟದಲ್ಲಿ ಕರಗಡ ಹಾಗೆ. ಮೈಸೂರು ದೇಶದಲ್ಲಿ, ಹೊಸಹಳ್ಳಿಯು ಕರಗಡಬಿನೊಳಗ ಹೂರಣದ ಹಾಗೆ. ಈ ಎರಡು ವಿಷಯಗಳೂ ನಿಸ್ಸಂಶಯವಾಗಿಯ

ನಿಜವಾದುವುಗಳು. ನೀವು ನೂರುಮಾತು ಹೇಳಬಹುದು; ನಾನೇನೂ ಬೇಡೆವೆನ್ನುವುದಿಲ್ಲ. ಆದರೆ ಈ ಮಾತು ಮಾತ್ರ ನಿಜ. ಹೊಸಹಳ್ಳಿಯನ್ನು ಹೊಗಳುವವನು ನಾನೇ ಅಲ್ಲ. ನಮ್ಮ ಊರಿನಲ್ಲಿ ಒಬ್ಬ ವೈದ್ಯರು ಇರುವರು; ಅವರ ಹೆಸರು ಗುಂಡಾಭಟ್ಟರು. ಅವರೂ ಹೇಳುವರು. ಅವರು ಸ್ವಲ್ಪ ಸೀಮೆಯನ್ನು ಸುತ್ತಿದವರು. "ನೀವು ಇಂಗ್ಲೆಂಡಿಗೆ ಹೋಗಿರುವಿರಾ?" ಎಂದು ಆರಾದರೂ ಈಗಣ ಕಾಲದ ಹುಡುಗರು ಕೇಳಿದರೆ, "ಇಲ್ಲ; ಅಣ್ಣಯ್ಯಗಳಿರಾ! ಅದನ್ನು ನಿಮಗೇ ಬಿಟ್ಟಿರುವೆನು. ಇದ್ದಕಡೆ ಇರಲಾರದೆ, ತೊಣಚಿ ಹೊಕ್ಕ ನಾಯಿಯಂತೆ ಅಲೆಯುವುದು ನಿಮಗೇ ಇರಲಪ್ಪ! ನಾನೆಲ್ಲೋ ಸ್ವಲ್ಪ ಸೀಮೆ ಸುತ್ತಿರುವೆನು," ಎಂದು ಹೇಳುವರು. ಆದರೆ ಬೇಕಾದಷ್ಟು ಊರು ನೋಡಿದಾರೆ.

ನಮ್ಮ ಊರಿನ ಮುಂದೆ ಇರುವ ತೋಪಿನಲ್ಲಿ ಕೆಲವು ಮಾವಿನ ಮರಗಳಿವೆ. ಒಂದು ದಿನ ನಮ್ಮೂರಿಗೆ ಬನ್ನಿ. ಒಂದು ಕಾಯನ್ನು ಕೊಡುವೆನು, ತಿನ್ನಿ. ತಿನ್ನುವುದೂ ಬೇಡ; ಸುಮ್ಮನೆ ಕಡಿಯಿರಿ; ಹುಳಿಯು ಬ್ರಹ್ಮರಂಧ್ರಕ್ಕೇರುವುದು. ನಾನೊಂದು ಸಲ ಆ ಕಾಯನ್ನು ತಂದೆನು. ಚಟ್ಟಣಿಯನ್ನು ಮಾಡಿದ್ದರು; ಎಲ್ಲರೂ ತಿಂದೆವು. ಸಾಲಾಗಿ ಎಲ್ಲರಿಗೂ ಕೆಮ್ಮು ಬರಬೇಕೆ? ಔಷಧಿಯನ್ನು ಕೇಳಲು ವೈದ್ಯರ ಬಳಿಗೆ ಹೋಗಿದ್ದೆ; ಆಗ ಅವರು ಆ ಮಾತನ್ನು ಹೇಳಿದರು.

ಈ ಮಾವಿನಕಾಯಿ ಹೇಗೆ ಶ್ರೇಷ್ಠವೊ, ನಮ್ಮ ಊರಿನ ಹತ್ತಿರವಿರುವುದೆಲ್ಲಾ ಹಾಗೆಯೇ ಶ್ರೇಷ್ಠ. ನಮ್ಮೂರಿನ ಕೊಳದಲ್ಲಿರುವ ನೀರು ಎಷ್ಟೋ ಚೆನ್ನಾಗಿದೆ. ಅದರ ಮಧ್ಯೆ ತಾವರೆಯ ಬಳ್ಳಿಯು ಬೆಳೆದುಕೊಂಡಿದೆ. ನೋಡುವುದಕ್ಕೆ ಪುಷ್ಪಗಳು ಬಹು ರಮ್ಯವಾಗಿವೆ. ಊಟಕ್ಕೆ ಎಲೆ ಇಲ್ಲದಿದ್ದರೆ, ಮಧ್ಯಾಹ್ನದ ವೇಳೆ ಸ್ನಾನಕ್ಕೆ ಹೋದಾಗ ಎರಡೆಲೆಯನ್ನು ತಂದರೆ, ಎಲೆಯನ್ನು ಹಚ್ಚುವ ಕಷ್ಟವೇ ಇಲ್ಲ! ಏನೇನೋ ಹೇಳುವೆನೆನ್ನುವಿರಿ. ನಮ್ಮೂರಿನ ಮಾತನ್ನೆತ್ತಿದರೇನೇ ಹಾಗೆ. ಹೋಗಲಿ; ಇನ್ನು ಸಾಕು. ನೀವು ಆರಾದರೂ ನೋಡಲಪೇಕ್ಷಿಸಿದರೆ, ಬರಲು ಇಷ್ಟವಿದ್ದರೆ, ನನಗೆ ಒಂದು ಕಾಗದವನ್ನು ಬರೆಯಿರಿ. ನಾನು ಹೊಸಹಳ್ಳಿ ಎಲ್ಲಿದೆ ಏನು ಹೇಗೆ ಎಂಬುದನ್ನು ಬರೆಯುವೆನು. ನೀವು ಆಮೇಲೆ ಬರಬಹುದು. ಆವುದನ್ನಾದರೂ ಕಣ್ಣಾರ ನೋಡುವುದೇ ಮೇಲಲ್ಲವೆ?

ನಾನು ಹೇಳುವುದು ಈಗ ಹತ್ತು ವರ್ಷದ ಹಿಂದಣ ವಿ
ಆಗ ನಮ್ಮ ಊರಿನಲ್ಲಿ ಇಂಗ್ಲೀಷು ಓದಿದವರು ಬಹುಜನರಿರಲಿಲ್ಲ. ಕ
ಕರೀ ಮೊದಲು ಧೈರ್ಯಮಾಡಿ ಮಗನನ್ನು ಬೆಂಗಳೂರಿಗೆ ಕಳು
ದ್ದರು. ಈಗ ಏನು, ಬಹುಜನರಿದಾರೆ. ರಜಾದಿನದಲ್ಲಂತೂ,
ಬೀದಿಗಳಲ್ಲೆಲ್ಲಾ ಹುಡುಗರು ಇಂಗ್ಲೀಷು ಮಾತನ್ನೇ ಆಡಿಕೊಳ್ಳು
ಆಗ ನಮ್ಮೂರಿನಲ್ಲಿ ಈ ಕೀಷುಬಾಷು ಮಾತು ಇರಲೇ ಇಲ್ಲ. ಕ
ದಲ್ಲಿ ಮಾತನಾಡುವಾಗಲೂ ಇಂಗ್ಲೀಷು ಮಾತನ್ನು ಸೇರಿಸುತ್ತಿರ
ಇದೊಂದು ನಗೆಗೇಡು. ಈಗ ನಾಲ್ಕು ದಿನಗಳ ಕೆಳಗೆ, ರಾಮರಾ
ರವರ ಮನೆಯಲ್ಲಿ ಒಂದು ಸೌದೆಯ ಹೊರೆಯನ್ನು ಕೊಂಡರು. ಅ
ಮಗನು ದುಡ್ಡು ಕೊಡುವುದಕ್ಕೆಂದು ಬಂದು, "ನಿನಗೆ ಎಷ್ಟು ಕೆ
ಬೇಕೆ?" ಎಂದು ಸೌದೆಯವಳನ್ನು ಕೇಳಿದನು. ಅದಕ್ಕೆ ಅವಳು "ಸ
ನಾಲ್ಕು ದುಡ್ಡು ಕೊಡಬೇಕು," ಎಂದಳು. ಅದಕ್ಕೆ ರಾಮರಾಯರ
"ಈಗ ಛೇಂಜು ಇಲ್ಲ. ಹೋಗು, ನಾಳೆ ಬಾ," ಎಂದು ಒಳಗೆ ಹೊ
ಹೋದನು. ಅವಳಿಗೆ ಪಾಪ! ಅರ್ಥವೇ ಆಗಲಿಲ್ಲ. ಅವಳು ಗ
ಗುಟ್ಟುತ್ತ ಹೊರಟುಹೋದಳು ಆಗ ನಾನೂ ಅಲ್ಲೇ ನಿಂ
ನನಗೂ ತಿಳಿಯಲಿಲ್ಲ. ಆಮೇಲೆ ರಂಗನ ಮನೆಗೆ ಬಂದು ರಂಗ
ಕೇಳಿದೆ. ಅವನು 'ಛೇಂಜ್' ಎಂದರೆ ಚಿಲ್ಲರೆ ಎಂದು ಹೇಳಿಕೊಟ್ಟ

ಈ ರೀತಿಯಾದ ಅಮೂಲ್ಯವಾದ ಇಂಗ್ಲೀಷು ಭಾಷೆಯು
ನಮ್ಮೂರಿನಲ್ಲಿ ಪ್ರಚುರವಾಗಿರಲಿಲ್ಲ. ಆದುದರಿಂದ ರಂಗನು ಬೆಂಗ
ನಿಂದ ಬಂದಾಗ ಊರಿನವರೆಲ್ಲರೂ "ಕರಣೀಕರ ಮಗ ಬಂದನಂ
"ಅಯ್ಯೋ! ಬೆಂಗಳೂರಿಗೆ ಓದುವುದಕ್ಕೆ ಹೋಗಿದ್ದನಲ್ಲಾ, ಆ ಹು
ಬಂದನಂತೆ!" "ಲೋ! ರಂಗ ಬಂದನಂತೆ! ನೋಡುವ, ಬಾರ
ಎಂದು ಅವರ ಮನೆಯ ಬಾಗಿಲಿಗೆ ಓಡಿಹೋದರು. ಜನಮರು
ಜಾತ್ರೆಮರುಳೋ? ನಾನೂ ಅವರ ಹಜಾರಕ್ಕೆ ಹೋಗಿ ನಿಂತುಕೊ
ಜನರ ಗುಂಪನ್ನು ನೋಡಿ "ಇವರೆಲ್ಲರೂ ಏಕೆ ಬಂದಿರುವರ
ಇಲ್ಲೇನು, ಕೋತಿ ಕುಣಿಯುವುದೇ?" ಎಂದೆನು. ಅಲ್ಲಿದ್ದ
ಹುಡುಗ—ಸ್ವಲ್ಪವೂ ಬುದ್ಧಿಯಿಲ್ಲ—"ನೀನೇಕೆ ಬಂದೆಯೋ?"
ಅಷ್ಟು ಜನರೆದುರಿಗೂ ನನ್ನನ್ನು ಕೇಳಿಬಿಟ್ಟನಲ್ಲಾ? ವೃದ್ಧ ಪು
ಮಾನ ಮರ್ಯಾದೆಯನ್ನರಿಯದ ಪೋರ. ಪೂರ್ವಕಾಲದ ನೀತಿಸ
ಮರೆಯಾದವೆಂದು ನಾನೂ ಸುಮ್ಮನಾದೆನು.

ಇಷ್ಟು ಜನರನ್ನು ನೋಡಿದ ರಂಗನು ನಗುತ್ತ ಹೊರಗೆ ಬಂದನು. ನಾವೆಲ್ಲರೂ ಒಳಗೆ ಹೋಗಿದ್ದರೆ—ಕಲಿಕತ್ತೆಯ ಕತ್ತಲೆಯ ಕೋಣೆ ಯೆಂದು ಹೇಳುವರಲ್ಲಾ?—ಅದರಂತೆ ಆಗುತ್ತಲಿತ್ತು. ದೇವರ ಕೃಪೆ ಯಿಂದ ಅದು ತಪ್ಪಿತು. ರಂಗನು ಹೊರಗೆ ಬಂದರೆ, ಎಲ್ಲರಿಗೂ ಅತ್ಯಾಶ್ಚರ್ಯ. ಆರು ತಿಂಗಳ ಹಿಂದೆ ನಮ್ಮೂರಿನಿಂದ ಹೋದಾಗ ಹೇಗೆ ಇದ್ದನೋ ಹಾಗೆಯೇ ಇದ್ದನು. ಒಬ್ಬ ಮುದಕಮ್ಮನವರು ಅವನ ಹತ್ತಿರವೇ ನಿಂತಿದ್ದರು. ಅವರು ಅವನ ಎದೆಯ ಮೇಲೆ ಕಯ್ಯಾಡಿಸಿ, ದೃಷ್ಟಿಸಿ ನೋಡಿ, "ಜನಿವಾರ ಇನ್ನೂ ಇದೆ! ಜಾತಿ ಕೆಡಿಸಿಲ್ಲ," ಎಂದು ಹೊರಟುಹೋದರು. ರಂಗನು ನಕ್ಕು ಬಿಟ್ಟನು.

ರಂಗನಿಗೆ ಮೊದಲಿನ ಹಾಗೆಯೇ ಕಯ್ಯಿ, ಕಾಲು, ಕಣ್ಣು, ಮೂಗು ಗಳೆಲ್ಲವೂ ಇದ್ದುದರಿಂದ—ಹುಡುಗನ ಬಾಯಲ್ಲಿ ಕಲ್ಲುಸಕ್ಕರೆ ಕರಗುವಂತೆ ಆ ದೊಂಬಿಯ ಗುಂಪು ಕರಗಿಹೋಯಿತು. ನಾನು ನಿಂತುಕೊಂಡೇ ಇದ್ದೆನು. ಎಲ್ಲರೂ ಹೋದಮೇಲೆ, "ಏನಯ್ಯಾ! ರಂಗಪ್ಪ! ಸೌಖ್ಯವಾ ಗಿರುವೆಯಾ?" ಎಂದು ಕೇಳಿದೆನು. ಆಗ ರಂಗನು ನನ್ನನ್ನು ನೋಡಿ ದನು. ನೋಡಿ ಹತ್ತಿರಕ್ಕೆ ಬಂದು ನಮಸ್ಕಾರವನ್ನು ಮಾಡಿ, "ತಮ್ಮ ಆಶೀರ್ವಾದದಿಂದ ಇಷ್ಟರ ಮಟ್ಟಿಗೆ ಇದೇನೆ," ಎಂದನು.

ರಂಗನಲ್ಲಿ ಇದ್ದುದು ಇದೊಂದು ದೊಡ್ಡ ಗುಣ; ನೋಡಿರಿ. ಯಾರೊ ಡನೆ ಮಾತನಾಡಿದರೆ ಪ್ರಯೋಜನವುಂಟೆಂದು ಅವನಿಗೆ ತಿಳಿದಿದ್ದಿತು. ಜನರ ಬೆಲೆಯನ್ನು ಅವನು ಚೆನ್ನಾಗಿ ಬಲ್ಲನು. ನಮಸ್ಕಾರಮಾಡಿದ್ದೋ? ಈಗಣ ಹುಡುಗರಂತೆ—ತಲೆಯನ್ನು ಮೇಲಕ್ಕೆ ಎತ್ತಿ ಸೂರ್ಯನನ್ನು ನೋಡುತ್ತ, ಸೊಂಟದ ಹತ್ತಿರ ಕೀಲೇ ಇಲ್ಲದಂತೆ ಕೋಲಿನಂತೆ ನಿಂತು ಕೊಂಡು ಕಯ್ಯನ್ನೋ, ಬೆತ್ತವನ್ನೋ ಅಲ್ಲಾಡಿಸುವಂತಲ್ಲ! ಸುಮ್ಮನೆ ಕಯ್ಜೋಡಿಸುವ ನಮಸ್ಕಾರವೂ ಅಲ್ಲ; ನೆಲಕ್ಕೆ ಬಗ್ಗಿ ಕಾಲುಗಳನ್ನು ಮುಟ್ಟಿ ಮಾಡಿದನು. ನಾನು "ಶೀಘ್ರಮೇವ ವಿವಾಹಮಸ್ತು" ಎಂದು ಆಶೀರ್ವದಿಸಿದೆನು. ಒಂದೆರಡು ಮಾತನ್ನಾಡಿ ಮನೆಗೆ ಹೊರಟೆನು.

*      *      *      *      *      *

ಮಧ್ಯಾಹ್ನ, ನಾನು ಊಟಮಾಡಿ ಮಲಗಿಕೊಂಡಿದ್ದಾಗ, ರಂಗನು ಎರಡು ಕಿತ್ತಲೆಯ ಹಣ್ಣುಗಳನ್ನು ಹಿಡಿದುಕೊಂಡು ನಮ್ಮ ಮನೆಗೆ ಬಂದನು.

"ಒಂದು ಜೋಡಿಸಕೂಡದು, ಒಂದು ತಾಗಲಕೂಡದು. ಅಲ್ಲವೆ?"

ರಂಗು—(ನಗುತ್ತ) ಎಷ್ಟುಸಲ್ಲಿ! ಹಾಂ ಹೌದು.

ಶಾಸ್ತ್ರೋಕ್ತವಾಗಿ ಮದುವೆಯಾದರೆ ಒಳ್ಳೆಯ ಸಂಸಾರವಾಗುವದೆಂದು ನಾವು ಯೋಚಿಸಿದರೆ ಈ ಹುಡುಗ ನಿತ್ಯಬ್ರಹ್ಮಚಾರಿಯಾಗಬೇಕೆಂದಿರುವನಲ್ಲ! ಎಂದು ನಾನು ಬಹು ವ್ಯಾಕುಲಚಿತ್ತನಾದೆನು. ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ರಂಗನನ್ನು ಕಳುಹಿಸಿಬಿಟ್ಟು, "ಈ ಹುಡುಗನಿಗೆ ಮದುವೆಮಾಡಿಸಲೇಬೇಕು," ಎಂದು ಶಪಥ ಮಾಡಿಕೊಂಡೆನು.

ನಮ್ಮ ರಾಮರಾಯರ ಮನೆಗೆ ಅವರ ಅಕ್ಕನ ಮಗಳು ಬಂದಿದ್ದಳು. ಹುಡುಗಿಗೆ ಹದಿನೈದು ವರ್ಷ. ಚೆಲೋಹುಡುಗಿ. ದೊಡ್ಡ ಪಟ್ಟಣದಲ್ಲಿದ್ದ ಹುಡುಗಿಯಾದುದರಿಂದ, ಸ್ವಲ್ಪ ವೀಣೆ, ಹಾರ್ಮೋನಿಯಂ ಬಾರಿಸಲು ಬರುತ್ತಿತ್ತು. ಸ್ವರವೋ! ಅತಿ ಮಧುರ! ತಾಯಿತಂದೆಗಳಿಬ್ಬರೂ ಸತ್ತುಹೋಗಿದ್ದುದರಿಂದ, ಮಾವನು ತನ್ನ ಮನೆಗೆ ಕರೆತಂದಿದ್ದನು. ಅವಳಿಗೆ ತಕ್ಕ ವರನು ರಂಗನು. ರಂಗನಿಗೆ ತಕ್ಕ ವಧು ಅವಳು.

ನಾನು ರಾಮರಾಯರ ಮನೆಗೆ ಬರುತ್ತ ಹೋಗುತ್ತ ಇದ್ದುದರಿಂದ ನನ್ನನ್ನು ಕಂಡರೆ, ಆ ಹುಡುಗಿಗೆ ಸಲಿಗೆ ಹೆಚ್ಚು. ಆ ಹುಡುಗಿಯ ಹೆಸರನ್ನು ಹೇಳುವುದನ್ನೇ ಮರೆತೆ. ಅವರ ಹೆಸರು—ರತ್ನ! ನಾನು ಮಾರನೆಯ ದಿನ ಪ್ರಾತಃಕಾಲ ರಾಮರಾಯರ ಮನೆಗೆ ಹೋಗಿ, ಅವರ ಹೆಂಡತಿಯನ್ನು ಕಂಡು, "ಮಜ್ಜಿಗೆಯನ್ನು ಕಳುಹಿಸುವೆನು. ರತ್ನನನ್ನು ನಮ್ಮ ಕಳುಹಿಸಿಕೊಡಿರಿ," ಎಂದು ಹೇಳಿಬಿಟ್ಟು ಬಂದೆನು.

ರತ್ನಮ್ಮ ಬಂದಳು. ಶುಕ್ರವಾರವಾದುದರಿಂದ ಒಳ್ಳೆಯ ಸೀರೆಯನ್ನು ಉಟ್ಟುಕೊಂಡಿದ್ದಳು. ಅವಳನ್ನು ನನ್ನ ಕೊಠಡಿಯಲ್ಲಿಯೇ ಕುಳ್ಳಿರಿಸಿ, "ಅಮ್ಮಾ! ಒಂದು ಸೊಗಸಾದ ಹಾಡನ್ನು ಹೇಳಮ್ಮ!" ಎಂದು ಬೇಡಿಕೊಂಡೆನು. ಆಗ ಆ ರಂಗನನ್ನು ಕರೆಯಕಳುಹಿಸಿದೆನು. ರತ್ನಮ್ಮ ಸುಮಧುರಸ್ವರದಿಂದ "ಕೃಷ್ಣಮೂರ್ತಿ ಕಣ್ಣಮುಂದೆ" ಎಂಬ ಹಾಡನ್ನು ಹಾಡುತ್ತಿದ್ದಾಗ ರಂಗನು ಬಂದನು. ಬಾಗಿಲವರೆಗೆ ಬಂದು "ಹೊಸ್ತಿಲ ಹತ್ತಿರ ಬಂದರೆ, ಎಲ್ಲಿ ಹಾಡುವುದು ನಿಂತುಹೋಗುವುದೋ!" ಎಂಬ ಭಯ; ಹಾಡುವವರನ್ನು ನೋಡಬೇಕೆಂಬ ಕುತೂಹಲ; ಮೆಲ್ಲಗೆ ಬಾಗಿಲಿನಿಂದ ಇಣಿಕಿನೋಡಿದನು. ಬೇರೆ ಮರೆಯಾದುದರಿಂದ ರತ್ನಮ್ಮ

ಬಾಗಿಲಕಡೆ ದಿಟ್ಟಿಸಿದಳು. ಅಪರಿಚಿತರು ಬಂದುದನ್ನು ಕಂಡು ಹಾಡು ವುದನ್ನು ನಿಲ್ಲಿಸಿಬಿಟ್ಟಳು.

ಕಸೀಮಾವಿನ ಹಣ್ಣನ್ನು ತಿನ್ನುವಾಗ 'ದುಡ್ಡು ಕೊಟ್ಟ ಹಣ್ಣಿನ ಯಾವ ಭಾಗವಾದರೂ ವ್ಯರ್ಥವಾಗಿ ಹೋಗುವುದಲ್ಲಾ!' ಎಂದು ಅದರ ತೊಗಟೆಯನ್ನು ಮೊದಲು ತಿಂದು ಆಮೇಲೆ ತಿರುಳಿನಲ್ಲಿ ಸ್ವಲ್ಪ ರುಚಿನೋಡಿ, ಉಳಿದುದನ್ನೂ ತಿನ್ನಲು ಪ್ರಯತ್ನಿಸಿದಾಗ ಅದು ಕಯ್ಜಾರಿ ಮರಳಿನಲ್ಲಿ ಬಿದ್ದುಹೋದರೆ, ನಿಮಗೆ ಯಾವ ವಿಧವಾದ ಖೇದವುಂಟಾಗುವುದೋ, ಅದೇ ವಿಧವಾದ ಖೇದವು ರಂಗನ ಮುಖದಲ್ಲಿ ತೋರಿ ಬಂದಿತು. "ಏನೋ ಬರಹೇಳಿದರಂತಲ್ಲ?" ಎಂದು ಒಳಗೆ ಬಂದು ಒಂದು ಕುರ್ಚಿಯ ಮೇಲೆ ಕುಳಿತುಕೊಂಡನು.

ರತ್ನಮ್ಮ ತಲೆ ಬಗ್ಗಿಸಿಕೊಂಡು ದೂರದಲ್ಲಿ ನಿಂತುಕೊಂಡಳು. ರಂಗನು ಪುನಃ ಪುನಃ ಅವಳ ಕಡೆಗೆ ನೋಡಿದನು. ಒಮ್ಮೆ ಅವಳನ್ನು ಹಾಗೆ ನೋಡುತ್ತಿದ್ದಾಗ ನನ್ನ ದೃಷ್ಟಿಯು ಅವನ ದೃಷ್ಟಿಯೊಡನೆ ಸೇರಿತು. ಆಗ ಅವನಿಗೆ ಬಹಳ ಅವಮಾನವಾಗಿರಬಹುದು. ಬಹಳ ಹೊತ್ತು ಆರೂ ಮಾತನಾಡಲಿಲ್ಲ. ಅನಂತರ ರಂಗನೇ ಮೊದಲು "ನಾನು ಬಂದುದರಿಂದ ಹಾಡು ನಿಂತುಹೋಯಿತು. ನಾನು ಹೊರಡುತ್ತೇನೆ," ಎಂದನು. ಬಾಯಲ್ಲಿ ಹೇಳಿದುದೆಷ್ಟೋ ಅಷ್ಟೆ! ಹೋಗುವೆನೆಂದ ದೊಡ್ಡ ಮನುಷ್ಯ ಕುರ್ಚಿಯನ್ನು ಬಿಟ್ಟೇಳಲೇ ಇಲ್ಲ. ಕಲಿಯುಗದಲ್ಲಿ ತ್ರಿಕರಣ ಶುದ್ಧಿಯೆಲ್ಲಿಯದು?

ರತ್ನಮ್ಮ ನಾಚಿಕೊಂಡು ಮನೆಯೊಳಗೆ ಓಡಿದಳು.

ಸ್ವಲ್ಪಹೊತ್ತು ಮೂಕನಂತೆ ಕುಳಿತಿದ್ದ ರಂಗನು "ಆ ಹುಡುಗಿ ಯಾರು ಸ್ವಾಮಿ?" ಎಂದು ಕೇಳಿದನು.

ಗುಡಿಯೊಳಗೆ ಅವಿತುಕೊಂಡಿದ್ದ ಹೋತವನ್ನು ಸಿಂಹವು ಹೊರಗಣಿಂದ "ಯಾರು ಅದು ಒಳಗೆ" ಎಂದು ಕೇಳಿದುದಕ್ಕೆ, ಮೇಕೆಯು "ಯಾರಾದರೇನು? ನಾನೊಂದು ಬಡಜಂತು. ಎಂಭತ್ತು ಗಂಡು ಸಿಂಹಗಳನ್ನು ತಿಂದು ಇದ್ದೇನೆ. ಇನ್ನೊಂದನ್ನು ತಿನ್ನಬೇಕೆಂದು ಮತವಿದೆ. ನೀನು ಗಂಡೋ? ಹೆಣ್ಣೋ?" ಎಂದು ಕೇಳಿತಂತೆ. ಅದಕ್ಕೆ ಸಿಂಹನು ಹೆದರಿ ಓಡಿಹೋಯಿತಂತೆ! ಆ ಹೋತನಂತೆಯೇ ನಾನೂ, "ಯಾರಾ

ವರೇನು ನನಗೂ ನಿನಗೂ? ನನಗೆ ಮದುವೆಯಾಗಿದೆ; ನೀನು ಮಾಡಿ ಕೊಳ್ಳುವುದಿಲ್ಲ!"—ಎಂದೆನು.

ಅದಕ್ಕೆ ರಂಗನು "ಆ ಹುಡುಗಿಗೆ ಇನ್ನೂ ಮದುವೆಯಿಲ್ಲವೆ?" ಎಂದು ಬಹಳ ಆಸೆಯಿಂದ ಕೇಳಿದನು. ಆಸೆಯಿದೆಯೆಂಬುದನ್ನು ತೋರ್ಪ ಡಿಸಲಿಲ್ಲ! ಆದರೆ ಅದು ನನಗೆ ತಿಳಿಯಿತು.

"ಆಗಿ ಒಂದು ವರ್ಷವಾಯಿತು."

ರಂಗನ ಮುಖ ಬೆಂಕಿಯಲ್ಲಿ ಬೆಂದ ಬದನೆಯಕಾಯಿ ಹಾಗೆ ಕಂದಿ ಹೋಯಿತು.

ಸ್ವಲ್ಪ ಹೊತ್ತಿನ ಮೇಲೆ ರಂಗನು "ನನಗೆ ಕೆಲಸವಿದೆ. ಮನೆಗೆ ಹೋಗುತ್ತೇನೆ," ಎಂದು ಹೊರಟುಹೋದನು.

ಮಾರನೆಯ ದಿನ ಬೆಳಿಗ್ಗೆ ನಮ್ಮ ಶಾಸ್ತ್ರಿಯ ಬಳಿಗೆ ಹೋಗಿ "ಜೋಸ್ಯ ಕೇಳುವುದಕ್ಕೆ ಬೇಕಾದುದನ್ನೆಲ್ಲ ಸರಿಯಾಗಿ ಇಡು. ಮಧ್ಯಾಹ್ನ ಬರು ವೆನು," ಎಂದು ಇನ್ನೂ ಹೇಳಬೇಕಾದುದನ್ನೆಲ್ಲ ಹೇಳಿಕೊಟ್ಟು ಮನೆಗೆ ಬಂದೆನು.

ಮಧ್ಯಾಹ್ನ ರಂಗನನ್ನು ಕಂಡಾಗ ಅವನು ಇನ್ನೂ ಹಾಗೆಯೇ ಇದ್ದನು. ನಾನೇ ಮೊದಲು "ಏನಪ್ಪಾ! ಬಹಳ ಆಲೋಚನೆಯನ್ನು ಮಾಡುತ್ತಿರುವಿರಿ?" ಎಂದು ಕೇಳಿದೆನು.

"ಆಲೋಚನೆಯೇನು? ಒಂದೂ ಇಲ್ಲ."

"ತಲೆನೋವೆ? ಬಾ! ವೈದ್ಯರ ಬಳಿಗೆ ಹೋಗೋಣ."

"ತಲೆನೋವಿಲ್ಲ. ನಾನು ಇರುವುದೇ ಹೀಗೆ."

"ನನಗೆ ಹುಡುಗಿಯನ್ನು ಗೊತ್ತು ಮಾಡುವ ಕಾಲದಲ್ಲಿ, ಎಲ್ಲವೂ ನಿಷ್ಕರ್ಷೆಯಾಗುವುದಕ್ಕೆ ಮೊದಲು, ನಾನೂ ಹೀಗೆಯೇ ಇದ್ದೆನು. ನಿನಗೆ ಆ ಕಾರಣವೇನೂ ಇರಲಾರದಷ್ಟೆ?"

ರಂಗನು ನನ್ನನ್ನೇ ದೃಷ್ಟಿಸಿ ನೋಡಿದನು.

"ಶಾಸ್ತ್ರಿಗಳ ಬಳಿಗೆ ಹೋಗೋಣ ಬಾ. ಗುರುಬಲ, ಶನಿಬಲ, ಸರಿಯಾಗಿದೆಯೋ ಇಲ್ಲವೋ, ವಿಚಾರಿಸುವ.

ರಂಗನು ಯಾವ ಆಲೋಚನೆಯನ್ನೂ ಮಾಡದೆ ಸುಮ್ಮನೆ ಮೇಲ
ಕ್ಕೆದ್ದನು. ಶಾಸ್ತ್ರಿಯ ಬಳಿಗೆ ಹೋದೆವು. ಅವನು "ಏನಯ್ಯಾ? ಶ್ಯಾಮು!
ನಿನ್ನನ್ನು ನೋಡಿ ಬಹಳ ದಿನಗಳಾದುವು!" ಎಂದನು.

ಪಾಠಕರೇ 'ಶ್ಯಾಮು' ನೆಂಬುವನು ಈ ಕತೆಯನ್ನು ಹೇಳುತ್ತಿರುವ
ತಮ್ಮ ಸೇವಕ.

ನನಗೆ ಕೋಪಬಂದಿತು. "ಇದೇನಯ್ಯಾ ಈ ಹೊತ್ತು......"
ಎಂದು ಹೇಳುವಷ್ಟರಲ್ಲಿಯೇ, "ಬಿಡುವಾಯಿತು, ಇದುವರೆಗೆ ಏನಾದರೂ
ಕೆಲಸದಲ್ಲಿದ್ದೆಯೋ ಏನೋ?" ಎಂದು ಶಾಸ್ತ್ರಿಯು ಹೇಳಿ ಪೂರ್ತಿಮಾಡಿ
ದನು. ಇಲ್ಲದಿದ್ದರೆ, "ಈ ಹೊತ್ತು ಬೆಳಿಗ್ಗೆ ಬಂದಿದ್ದೆನಲ್ಲಾ?" ಎಂದು
ನಾನು ಹುಚ್ಚನಹಾಗೆ ಹೇಳಿ, ಬಿಸಲಿನಲ್ಲಿಟ್ಟ ಹರಳಿನಕಾಯಂತೆ ನಮ್ಮ
ತಂತ್ರವೆಲ್ಲಾ ಸಿಡಿದುಹೋಗುವ ಹಾಗೆ ಮಾಡಿಬಿಡುತ್ತಿದ್ದೆ. ಆಮೇಲೆ
ಬಹಳ ಜಾಗರೂಕನಾಗಿದ್ದೆನು.

„ನಮ್ಮ ಕರಣೀಕರ ಮಕ್ಕಳು ಯಾವಾಗ ಬಂದರು? ಏನಾಗ
ಬೇಕು? ಅವರು ನಮ್ಮ ಮನೆಗೆ ಬರುವುದೇ ಅಪರೂಪ!" ಎಂಬ
ಇತ್ಯಾದಿ ಮರ್ಯಾದೆಗಳೆಲ್ಲ ನಡೆದುವು.

"ನಿನ್ನ ಗಂಟನ್ನು ಬಿಚ್ಚಯ್ಯ; ನಮ್ಮ ರಂಗಪ್ಪನಿಗೇನೋ ಬಹಳ
ಆಲೋಚನೆ ಬಂದಿದೆ. ಅದರ ಕಾರಣವೇನು ಹೇಳಬಲ್ಲೆಯಾ? ನಿಮ್ಮ
ಜ್ಯೋತಿಷ್ಯಶಾಸ್ತ್ರದ ಶಕ್ತಿಯನ್ನು ಪರೀಕ್ಷಿಸುವ!" ಎಂದು ನಾನು ಬಹಳ
ದರ್ಪದಿಂದ ಹೇಳಲು, ಶಾಸ್ತ್ರಿಯು ಎರಡು ಕಾಗದ, ಕೆಲವು ಕವಡೆ
ಒಂದು ಓಲೆಪುಸ್ತಕ, ಇದನ್ನೆಲ್ಲ ತೆಗೆದು, "ಅನಾದಿಯಾದ ಶಾಸ್ತ್ರವಯ್ಯಾ
ಇದು, ಇದಕ್ಕೆ ಒಂದೂ ಕಥೆಯೂ ಇದೆ," ಎಂದು ಒಂದು ಕಥೆಯನ್ನು
ಹೇಳಿದನು. ಆ ಕಥೆಯನ್ನು ನಾನು ಈಗ ಇಲ್ಲಿ ಹೇಳುವುದಿಲ್ಲ. ಕ
ಯಲ್ಲಿ ಉಪಕಥೆಯನ್ನು ಸೇರಿಸಲು ಇದೇನು ಹರಿಕಥೆಯೆ? ಅಲ್ಲ
ನಿಮಗೂ ಬೇಸರವಾಗಬಹುದು. ಇನ್ನು ಯಾವಾಗಲಾದರೂ ಬಿಡುವ
ದೊರೆತರೆ ಹೇಳುವೆನು.

ಶಾಸ್ತ್ರಿಯು ತುಟಿಗಳನ್ನು ಪಿಟಿ ಪಿಟಿ ಆಡಿಸುತ್ತ ಬೆರಳುಗಳನ
ಎಣಿಸುತ್ತಿದ್ದು ಸ್ವಲ್ಪ ಹೊತ್ತಾದಮೇಲೆ "ನಿಮ್ಮ ನಕ್ಷತ್ರವು ಯಾವದು

ಎಂದು ಕೇಳಿದನು. ರಂಗನು ತಿಳಿಯದೆಂದನು. ಶಾಸ್ತ್ರಿ ಚಿಂತೆಯಿಲ್ಲ ವೆಂದು ತಲೆಯಲ್ಲಾಡಿಸಿ, ಲೆಕ್ಕಮಾಡಿ, ಕೊನೆಗೆ "ಕನ್ಯಾ ವಿಷಯವಾದ ಆಲೋಚನೆ," ಎಂದು ಬಹು ಗಾಂಭೀರ್ಯದಿಂದ ಹೇಳಿದನು. ಅವನ ಆಟಗಳನ್ನು ನೋಡುತ್ತಿದ್ದ ನನಗೆ ನಗು ತಡೆಯಲಾರದ ಹಾಗಿದ್ದುದು. ಆದರೂ ನಗಲಾರದೆ ಇದ್ದ ನಾನು ಈ ಮಾತನ್ನು ಕೇಳಿದ ಕೂಡಲೆ ಫಕ್ಕನೆ ನಕ್ಕು "ಏನಯ್ಯ ರಂಗ? ನಾನು ಹೇಳಿದಹಾಗೆಯೇ ಆಯಿತಲ್ಲ?" ಎಂದೆನು.

"ಕನ್ಯೆಯಾರು?"--ಕೇಳಿದವನು ನಾನು; ತಮ್ಮ ದಾಸ.

ಸ್ವಲ್ಪಹೊತ್ತು ಆಲೋಚನೆಮಾಡಿ—"ಸಮುದ್ರದಲ್ಲಿ ಸಿಕ್ಕುವ ಪದಾರ್ಥದ ಹೆಸರಿನ ಹುಡುಗಿಯಾಗಿರಬೇಕು."

"ಕಮಲ—ಎಂತಲೆ?"

"ಸಮುದ್ರದಲ್ಲಿ ಕಮಲವೆಲ್ಲಿಯದು?"

"ಹಾಗಾದರೆ ಪಾಚಿ ಇರಬಹುದು."

"ಕಮಲವನ್ನು ಬಿಟ್ಟರೆ, ಪಾಚಿಯೇನೆ ಇರುವುದು? ಮುತ್ತು ರತ್ನ ಎಲ್ಲಾ ಇರುವುದು."

"ರತ್ನವೇ? ರಾಮರಾಯರ ಮನೆಗೆ ಬಂದಿರುವ ಹುಡುಗಿಯ ಹೆಸರೂ ರತ್ನ. ಹೋಗಲಿ; ಕನ್ಯಾಲಾಭವಾಗಬಹುದೋ?

ಪುನಃ ಸ್ವಲ್ಪ ಆಲೋಚಿಸಿ "ಆಗುವುದು."

ರಂಗನ ಮುಖವು ಆಶ್ಚರ್ಯದಿಂದ ತುಂಬಿತ್ತು. ಅದರಲ್ಲಿ ಸ್ವಲ್ಪ ಸಂತೋಷವೂ ಇತ್ತು. ನಾನು ಅದನ್ನು ನೋಡಿ "ಆ ಹುಡುಗಿಗೆ ಮದುವೆಯಾಗಿವೆಯಲ್ಲ?" ಎಂದೆನು. ನನ್ನ ಮಾತು ಮುಗಿಯಲೇ ಇಲ್ಲ. ಹಾಗೆ ಒಂದು ಸಾರಿ ತಿರುಗಿ ನೋಡಿದೆನು. ರಂಗನ ಮುಖ ಅಷ್ಟರಲ್ಲಿ ಮಂಕಾಗಿ ಹೋಗಿತ್ತು.

"ಅದನ್ನೆಲ್ಲಾ ಕಾಣೆ. ಇನ್ನಾರಾದರೂ ಇರಬಹುದು. ಶಾಸ್ತ್ರವು ಹೇಳಿದುದನ್ನು ನಾನು ಹೇಳಿದೆ."

ಅಲ್ಲಿಂದ ಹೊರಟೆವು. ಬರುತ್ತ ರಾಮರಾಯರ ಮನೆಯ ಬಾಗಿಲಿನಲ್ಲಿ ರತ್ನವು ನಿಂತಿದ್ದುದನ್ನು ನೋಡಿ, ನಾನು ಮಾತ್ರ ಒಳಗೆ ಹೋಗಿ,

ಪುನಃ ಹೊರಗೆ ಬಂದೆನು. ಬಂದಕೂಡಲೆ, ರಂಗನನ್ನು ಕುರಿತು "ಏ
ಆಶ್ಚರ್ಯವಪ್ಪ? ಈ ಹುಡುಗಿಗೆ ಮದುವೆಯಾಗಿಯೇ ಇಲ್ಲವಂತೆ ? ನ
ಯಾರೋ ಆ ದಿನ ಆಗಿದೆಯೆಂದು ಹೇಳಿದ್ದರು. ಈಗ ಶಾಸ್ತ್ರವು ಹೇ
ದುದೆಲ್ಲ ನಿಜವಾಗಿಯೇ ಪರಿಣಮಿಸಿತು. ರಂಗಪ್ಪ, ನೀನೇನೋ
ಹುಡುಗಿಗೋಸ್ಕರ ಆಲೋಚನೆ ಮಾಡುತ್ತಿದ್ದೆಯೆಂಬುದನ್ನು ನಾನು ಸ
ಲಾರೆ. ಏನಯ್ಯ, ಮಧ್ವಾಚಾರ್ಯರಾಣೆ ಹೇಳು; ನನ್ನ ಹತ್ತಿರ ಮ
ಮಾಚಬೇಡ. ಅವರು ಹೇಳಿದ್ದೆಲ್ಲ ನಿಜವೋ, ಅಲ್ಲವೋ?"

ಇನ್ನಾರಾದರೂ ಆಗಿದ್ದರೆ, ಹೇಳುತಿದ್ದರೊ, ಇಲ್ಲವೋ ನಾನರಿಯೆ
ರಂಗನು "ಶಾಸ್ತ್ರದಲ್ಲಿ ನಮಗೆ ತಿಳಿದಿರುವುದಕ್ಕಿಂತ ಹೆಚ್ಚು ನಿಜವಿ
ಅವರು ಹೇಳಿದ್ದೆಲ್ಲ ನಿಜವೆ!" ಎಂದು ಒಪ್ಪಿಕೊಂಡನು.

ಆ ದಿನ ಸಾಯಂಕಾಲ ಶಾಸ್ತ್ರಿ ಬಾವಿಯಬಳಿ ಬಂದಿದ್ದನು ನಾನ
ಹೋಗಿದ್ದೆನು. ಆಗ ಅಲ್ಲಿ ನಾನು "ಏನು ಶಾಸ್ತ್ರಿಗಳೇ! ನಾನು ಹೇ
ಕೊಟ್ಟುದನ್ನು ಸ್ವಲ್ಪವಾದರೂ ಅನುಮಾನಹುಟ್ಟದಂತೆ ಸರಿಯಾಗಿ ಹೇ
ದಿರಿ. ಅಬ್ಬಾ ಏನು ಶಾಸ್ತ್ರವಯ್ಯ ನಿನ್ನದು!" ಎಂದು ಹೇಳ
ಶಾಸ್ತ್ರಿಯು "ಏನನ್ನು ನೀನು ಹೇಳಿದ್ದು? ಶಾಸ್ತ್ರಾಧಾರದಿಂದ ಕಂ
ಹಿಡಿಯಬಹುದಾಗಿದ್ದುದನ್ನೇ ನೀನು ಹೇಳಿದಿ. ನೀನು ಮೊದಲೇ ಹೇ
ದಿದ್ದರೂ ನಾನೇ ಕಂಡುಹಿಡಿದು ಹೇಳುತಿದ್ದೆ. ನೀನೇಲ್ಲೋ ಸ್ವಲ್ಪ ಹೇಳಿ
ನಾನೆಷ್ಟು ಹೇಳಿದೆ ನೋಡು!" ಎಂದು ಉತ್ತರಕೊಟ್ಟನು. ಇ
ಅಲ್ಲವೆ ಯೋಗ್ಯರ ನಡತೆ?

* * * * * *

ಮೊನ್ನೆಯದಿನ ರಂಗನು ನನ್ನನ್ನು ಔತನದ ಊಟಕ್ಕೆ ಕರೆಯಲ
ಬಂದಿದ್ದನು. ನಾನು "ಈ ದಿನ ಏನಯ್ಯ?" ಎಂದು ಕೇಳಿದೆನು.

"ಶ್ಯಾಮನು ಹುಟ್ಟಿದ ದಿನ; ಮೂರು ವರ್ಷ ತುಂಬಿತು."

"ಶ್ಯಾಮ ಎನ್ನುವ ಹೆಸರು ಚೆನ್ನಾಗಿಲ್ಲ. ನಾನು ಕರಿಯುಗಾಣ
ತುಂಡಿನಂತೆ ಇರುವೆನು. ನನ್ನ ಹೆಸರನ್ನು ತೆಗೆದುಕೊಂಡು ಹೋಗಿ
ಚಿನ್ನದ ಕೊಳಗದಂತಿರುವ ಮಗುವಿಗೆ ಇಟ್ಟು ಏನುಮಾಡಿದಿರಿ? ನೀನ
ಸರಿಯೇ; ನಿನ್ನ ರತ್ನಳೂ ಸರಿಯೆ. ಶುದ್ಧ ಹುಡುಗು ಸಹವಾಸ! ಸರಿ, ಸ

ಇಂಗ್ಲೀಷು ಪದ್ಧತಿಗಳೇ ಹೀಗೆ! * ನಿನ್ನ ಹೆಂಡತಿ ಎಂಟು ತಿಂಗಳು ಗರ್ಭಿಣಿಯಾಗಿದ್ದರೆ, ನಿಮ್ಮಮ್ಮನ ಜತಿಗೆ ಅಡಿಗೆ ಮಾಡುವರಾರು?"

"ಅಕ್ಕನೂ ಅಮ್ಮನ ಕೂಡ ಬಂದಿದ್ದಾಳೆ."

ಊಟಕ್ಕೆ ಹೋಗಿದ್ದೆನು. ಹೋದಾಗ ಶ್ಯಾಮನು ಇದುರಿಗೆ ಬಂದು ನನ್ನ ಕಾಲುಗಳನ್ನು ಅಪ್ಪಿಕೊಂಡನು. ನಾನು ಅವನ ಬಾಯ ಮೇಲೆ ಒಂದು ಮುತ್ತನ್ನು ಕೊಟ್ಟು, ಕೋಮಲಾಂಗುಳಿಗೆ ಒಂದುಂಗುರವನ್ನಿಟ್ಟೆನು.

* * * * * *

ಸ್ವಾಮಿ! ತಮ್ಮ ದಾಸನಿಗೆ ಇನ್ನು ಅಪ್ಪಣೆಕೊಡುವಿರಾ? ನಾನೇನೊ ನಿಮ್ಮ ಸೇವೆಗೆ ಆವಾಗಲೂ ಸಿದ್ಧನಾಗಿಯೇ ಇರುವೆನು. ಬೇಸರವಿಲ್ಲವಷ್ಟೆ?

---

* ಇಂಗ್ಲೀಷರಲ್ಲಿ ಯಾರಿಗಾದರೂ ಮಕ್ಕಳಾದರೆ, ತಮ್ಮ ಇಷ್ಟರಾದವರನ್ನು ಕರೆದು ಅವರಲ್ಲೊಬ್ಬರ ಹೆಸರನ್ನು ಮಗುವಿಗೆ ಇಡುವ ಪದ್ಧತಿಯುಂಟು.

# ವಚನಗಳು.

(೧) ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ? ಅವರಿಗಾ ದೊಡೆಗೇನು? ತನಗಾದೊಡೆಗೇನು? ತನುವಿನ ಕೋಪ ತನ್ನ ಹಿರಿಯ ತನದ ಕೇಡು. ಮನದ ಕೋಪ ತನ್ನ ಅರಿವಿನ ಕೇಡು. ಮನೆಯೊಳ ಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆವನೆ ಬೇವುದೇ ಕೂಡಲಸಂಗಮ ದೇವಾ?

(೨) ಕಾಣದ ಠಾವಿನಲ್ಲಿ ಜರಿದೊಡೆ ಕೇಳಿ ಪರಿಣಾಮಿಸಬೇಕು ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ ಎನ್ನ ಮನದ ದ್ವೇಷವಳಿದು ಶರಣೆಂಬುದ ಕರುಣಿಸು ಕೂಡಲಸಂಗಮ ದೇವಾ.

(೩) ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂ ದೊಡೆಂತಯ್ಯ? ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆ ತೆರೆ ಗಳಿಗಂಜಿದೊಡೆಂತಯ್ಯ? ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ? ಚನ್ನಮಲ್ಲಿಕಾರ್ಜುನ ಕೇಳಯ್ಯ, ಲೋಕದೊಳಗ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದೊಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

(೪) ಲೋಕ ಒಂದನೆಂದೊಡೆ ತಾನೊಂದೆನಬೇಡ. ಮತ್ತಾರ ನೆಂದೊಡೆಯೂ ತನ್ನನೆಂದರೆನಬೇಡ. ಇದನರಿದು ಛೈತ್ರಕ್ಕೆ ಬೆಂಗುಂ ನಿಕ್ಕಿದಂತಿರಬೇಕು ಗುಹೇಶ್ವರಾ.

(೫) ಹೊಯಿದವರೆನ್ನ ಹೊರೆದವರೆಂಬೆನು. ಬೈದವರೆನ್ನ ಬಂಧು ಗಳೆಂಬೆನು. ನಿಂದಿಸಿದವರೆನ್ನ ತಾಯಿ ತಂದೆಗಳೆಂಬೆನು. ಜರಿದವರೆನ್ನ ಜನ್ಮಬಂಧುಗಳೆಂಬೆ. ಕೊಂಡಾಡಿದವರೆನ್ನ ಹೊನ್ನ ಶೂಲದಲಿಕ್ಕಿದ ಕೂಡಲಸಂಗಮದೇವಾ.

(೬) ಇದಿರೆನ್ನ ಹಳಿವರು ನುಡಿಯ ಬೆಳಗುವರು. ಮನದ ಕಾಳಿ ಕೆಯ ಕಳೆವರೆನ್ನ ನಂಟರು. ದುರಾಚಾರದಲಿ ನಡೆವರು ಕನ್ನಡಿ ಎನಗೆ

ಇದು ಕಾರಣ ಅನ್ಯದೇಶಕ್ಕೆ ಹೋಗಲೊಲ್ಲೆ. ಸಕಳೇಶ್ವರ ದೇವರ ತೋರುವ ದೊಳರಿಲ್ಲಿಯೇ.

(೭) ಚಂದನವ ಕಡಿದು ಕೊರಡು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದೊಡೆ ಬಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದ ಕಬ್ಬುವ ತಂದು ಗಾಣದಲಿಕ್ಕಿ ಬೆಂದು ಪಾಕಾಗಿ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೇ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ಹಾನಿಯೇ? ಎನ್ನ ತಂದೆ ಚೆಲ್ಲಿಕಾರ್ಜುನ ದೇವಯ್ಯ ಕೊಂದೊಡೆ ಶರಣೆಂಬುದ ಮಾಣೆ.

(೮) ಒಂದಾಗಿಹವೈದು ಭೂತ. ಚಂದ್ರ ಸೂರ್ಯ ನಿಮ್ಮ ತನುವಲ್ಲವೇ? ನಿಂದು ನೋಡಲು ಜಗಭರಿತನಾಗಿಪ್ಪೆ. ಇನ್ನು ನೋಯಿಸುವೆನಾರನಯ್ಯ ರಾಮನಾಥಾ?

(೯) ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಹ ವಚನವ ನುಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸುವುದು, ಅಪಾತ್ರದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶವ ಮಾಡುವುದು. ಇದೇ ಮೊದಲಲ್ಲಿ ಬೇಹ ಶೌಚ ನೋಡಾ ಕೂಡಲಚನ್ನಸಂಗಮದೇವಾ.

(೧೦) ದಯವಿರಬೇಕು ಸಕಲ ಪ್ರಾಣಿಗಳಲ್ಲಿ. ಸ್ನೆಯವಿರಬೇಕು ಸಕಲ ಗುಣಗಳಲ್ಲಿ. ನಯವಿರಬೇಕು ನುಡಿಗಡಣದಲ್ಲಿ. ಇಂತೀ ಗುಣವಿಲ್ಲದವರ ಕಂಡೊಡೆ ಸೊಗಸದಯ್ಯ ಎನಗೆ ಅಖಂಡೇಶ್ವರಾ.

(೧೧) ನಿಜವರಿಯದವರು ಗಿರಿ ಗಂಹ್ವರದಲ್ಲಿದ್ದು ಫಲವೇನು? ಮನವು ಲೇಸಾದೊಡೆ ಸಾಲದೇ? ಮನವು ಲೇಸಾಗಿ ಪರಮ ಸುಖಿಯಾಗಿಪ್ಪ ಶರಣನ ಹೃದಯದಲ್ಲಿ ಸದಾ ಸನ್ನಿಹಿತ ಸಕಳೇಶ್ವರದೇವಾ.

(೧೨) ತನುವೆಂಬ ಏರಿಗೆ ಮನವೆಂಬ ಕಟ್ಟೆ, ಸದಾಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟ ಬಲ್ಲವರನಾರನೂ ಕಾಣೆ. ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ.

(೧೩) ತಾನು ಒಳ್ಳಿಯವನಾದರೆ ತನಗೆ ಎಲ್ಲರೂ ಒಳ್ಳಿಯವರಾಗಿಪ್ಪರು. ತಾ ಹೀನನಾದರೆ ತನಗೆ ಸರ್ವರೂ ಹೀನರಾಗಿಪ್ಪರು. ತಾನು ಒಳ್ಳಿಯವನಾಗಿ ಸರ್ವರೂ ಹೀನರಾದರೆ ಅದು ತನ್ನ ಪೂರ್ವದ ಕರ್ಮ.

ತಾ ಹೀನನಾಗಿ ತನಗೆ ಸರ್ವರೂ ಒಳ್ಳೆಯುವರಾದರೆ ಅದು ತನ್ನ ದೈವದ ಬಲವು ನೋಡಾ ಅಖಂಡೇಶ್ವರಾ.

(೧೪) ನಾನೊಂದು ಸುರಿಗೆಯನೇನೆಂದು ಹಿಡಿವೆನು? ಏನಕೆ ತ್ತೀನನಿರಿವೆನು? ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥಾ.

(೧೫) ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಮದೇವರಂತಲ್ಲದೊಲ್ಲನಯ್ಯ.

(೧೬) ದೊರೆಕೊಂಡಂತೆ ಮನ ತಣಿದಿಪ್ಪವರ, ದುಃಖಕ್ಕೆ ಹೊರಾಗಿಪ್ಪವರ, ಒಳಗನರಿದು ಹೊರಗೆ ಮರೆದವರ, ಸದಾನಂದದಲ್ಲಿ ಸುಖಿಯಾಗಿಪ್ಪವರ ಎನಗೊಮ್ಮೆ ತೋರಾ ಸಕಳೇಶ್ವರ ದೇವಾ. ಎನಗಿದೇ ವರವನೀವುದು ಕಂಡ್ಯಾ ತಂದೆ.

(೧೭) ಆರೇನೆಂದರೂ ಓರಂತಿಪ್ಪುದೇ ಸಮತೆ. ಆರು ಜರಿದರೂ ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ. ಆರು ಸ್ತೋತ್ರವ ಮಾಡಿಹರೆನ್ನ ಜನ್ಮದ ಹಗೆಗಳೆಂಬುದೇ ಸಮತೆ. ಮನ ವಚನಕಾಯದಲ್ಲಿ ಅಹಿತವಿಲ್ಲದೆ ನಿಮ್ಮವರ ನೀನೆಂಬುದೇ ಸಮತೆ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ.

(೧೮) ಸಿರಿಯಾಯಿತ್ತೆಂದು ಉಚ್ಚಹದಿಂದುಬ್ಬದೆ, ಕೆಟ್ಟಿತ್ತೆಂದು ಮನನೊಂದು ಭಿನ್ನವಾದಂತಿರವೇಡಾ. ಮನ ವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊಂದಿರ್ಪುದು ಹೇಳಾ ಕಪಿಲ ಸಿದ್ಧಮಲ್ಲಿಕಾರ್ಜುನಾ.

(೧೯) ದೇವಲೋಕ ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣಿರೋ ಸತ್ಯವ ನುಡಿವುದೇ ದೇವಲೋಕ. ಅಸತ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣು ಕೂಡಲ ಸಂಗಮದೇವಾ.

(೨೦) ಹೊಲೆಯರ ಬಾವಿಯಲೊಂದು ಎಲು ನಟ್ಟಿದ್ದರೆ ಹೊಲೆ ಹೊಲೆ ಎಂಬುದೀ ಲೋಕವೆಲ್ಲ. ಹಲವೆಲುವಿಪ್ಪ ಬಾಯಲ್ಲಿ ಅಲ್ಲದುದನಾಡಿದರೆ ಅದು ಹೊಲೆಯರ ಬಾವಿಂದ ಕರಕಷ್ಟ ಕಾಣಾ ರಾಮನಾಥಾ.

(೨೧) ಬಟ್ಟೆಯಲ್ಲಿ ಹೊನ್ನ ವಸ್ತ್ರ ಬಿದ್ದಿದ್ದರೆ, ನಾನು ಕೈಮುಟ್ಟಿ ಎತ್ತಿದೆನಾದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಅದೇನು ಕಾರಣವೆಂದೊಡೆ, ನೀವಿಕ್ಕಿದ ಭಿಕ್ಷೆಯಲ್ಲಿಪ್ಪೆನಾಗಿ. ಅಂತಲ್ಲದೆ ನಾನು ಆಳಿಮನವ ಮಾಡಿ, ಪರದ್ರವ್ಯಕ್ಕೆ ಆಶೆಮಾಡಿದೆನಾದೊಡೆ ನೀನಾಗಲೇ ಎನ್ನ ನರಕದಲ್ಲದ್ದಿ ನೀನೆದ್ದು ಹೋಗಾ ಶಂಭುಜಕ್ಕೇಶ್ವರಾ.

(೨೨) ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲಿ. ನಾಳೆ ಆವಿನ ಬೆನ್ನ ಮೇಲೆ ಹರಿಯಲಿ. ಅದೇಕಯ್ಯಾ, ಲಜ್ಜೆಗೆಡಲೇಕಯ್ಯಾ? ನಾಣುಗೆಡಲೇಕೆ? ಕೂಡಲ ಸಂಗಮದೇವರುಳ್ಳನ್ನಕ್ಕರ ಬಿಜ್ಜಳನ ಭಂಡಾರ ಎನಗೇಕಯ್ಯಾ?

(೨೩) ಎನಗೆ ನಾನೇ ಹಗೆ ನೋಡಯ್ಯಾ! ಎನಗೆ ನಾನೇ ಕೆಳೆ ನೋಡಯ್ಯಾ! ನಿಮ್ಮ ಸದ್ಭಕ್ತರೊಡನೆ ವಿರೋಧವ ಮಾಡಿದೊಡೆ ಎನ್ನ ಕೊಲುವುದಾಗಿ, ನಿಮ್ಮ ಪುರಾತನರಿಗಂಜಿ ಬೆಸಗೊಂಡೊಡೆ, ಎನ್ನ ಕಾಯ್ವುದಾಗಿ, ಅನ್ಯರು ಹಗೆಯಲ್ಲ, ಕೆಳೆಯಲ್ಲ. ಬಾಗಿದ ತಲೆಯ ಮುಗಿದ ಕಯ್ಯಾಗಿರಿಸು ಕೂಡಲಸಂಗಮದೇವಾ.

(೨೪) ಕಂಡ ಭಕ್ತಂಗೆ ಕೈಮುಗಿವಾತನೇ ಭಕ್ತ. ಮೃದು ವಚನಂಗಳೇ ಸಕಲ ತಪಂಗಳಯ್ಯಾ. ಕೂಡಲ ಸಂಗಮದೇವಯ್ಯನಂತಲ್ಲದೊಲ್ಲನಯ್ಯಾ.

(೨೫) ಬಲ್ಲವರು ಬೆಸಗೊಂಡರೆ, ಮೆಲ್ಲನಾರೈದ ಮೆಲ್ಲನೆ ನುಡಿಯಬೇಕು. ಕಲ್ಲು ಕಲ್ಲು ತಾಗಿದಂತೆ ಸೊಲ್ಲು ಬಿರಿಯಾದೊಡೆ ಅಲ್ಲಿ ನಿಲ್ಲನಯ್ಯಾ ಅಖಂಡೇಶ್ವರಾ.

(೨೬) ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ. ಮುನಿಯಬೇಡ, ಅನ್ಯರಿಗೆ ಅಸಹ್ಯವ ನುಡಿಯಲುಬೇಡ. ತನ್ನ ಬಣ್ಣಿಸಬೇಡ. ಇದಿರ ಹಳಿಯಲುಬೇಡ. ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ. ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.

(೨೭) ಆತ್ಮಸ್ತುತಿ ಪರನಿಂದೆಯ ಕೇಳಿಸದಂತೆ ಇರಿಸಯ್ಯಾ. ನಿಮ್ಮ ಧರ್ಮ. ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ ನಿಮಗಾನು ದ್ರೋಹಿಯಯ್ಯಾ. ಕೂಡಲಸಂಗಮದೇವ ನಿಮ್ಮವರ ಲೇಸೇ ಎನ್ನ ಲೇಸಯ್ಯಾ.

(೨೮) ಜನಮೆಚ್ಚ ಶಬ್ದನಲ್ಲದೆ ಮನಮೆಚ್ಚ ಶಬ್ದನಲ್ಲವಯ್ಯ, ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯ. ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯ. ಧನ ದೊರಕದೆ ನಿಸ್ಪೃಹಿಯಲ್ಲದೆ ಧನದೊರಕಿ ನಿಸ್ಪೃಹಿಯಲ್ಲಯ್ಯ. ಏಕಾಂತ ದ್ರೋಹಿ ಗುಪ್ತಪಾತಕಿ. ಯುಕ್ತಿ ಶೂನ್ಯರಿಗೆ ಸಕಳೇಶ್ವರದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯ?

(೨೯) ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸಾವ ತೆರನಂತೆ, ಮನ ಬಂದುದ ಬಯಸಿ ಬೇವುತ್ತಿರುವೆನಯ್ಯ. ಎನ್ನ ಮನದ ದುರಾಸೆಯ ಮಾಣಿಸಿ, ನಿವೃತ್ತಿ ತೋರಾ ಚನ್ನಮಲ್ಲಿಕಾರ್ಜುನಾ.

(೩೦) ಆಸೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು. ಆಸೆಯ ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ನಮ್ಮ ಅಂಬಿಗರ ಚೌಡಯ್ಯ.

(೩೧) ಆಸೆಯುಳ್ಳನ್ನಕ್ಕರ ಒಬ್ಬರ ಆಶ್ರಯಿಸುವುದು. ಆಶ್ರಯ ದಾಸೆ ಕಷ್ಟ ಕಾಣಿರಯ್ಯ. ಆಸೆಯೇ ದಾಸತ್ವ, ನಿರಾಶೆಯೇ ಈಶತ್ವ. ದಾಸತ್ವದ ಈಶತ್ವದ ಅನುವ ವಿಚಾರಿಸಿ ನಿರಾಶೆಯಾಗಿಪ್ಪದೇ ಈಶ ಪದವಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

(೩೨) ಆಶೆಯಿಂದ ಬಿಟ್ಟು ಕಿರಿಯರಿಲ್ಲ. ನಿರಾಶೆಯಿಂದ ಬಿಟ್ಟು ಹಿರಿಯರಿಲ್ಲ. ದಯದಿಂದ ಬಿಟ್ಟು ಧರ್ಮವಿಲ್ಲ. ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ. ಸಭ್ಯರಾಚಾರಕ್ಕೆ ಸಕಳೇಶ್ವರ ದೇವರಿಂದ ಬಿಟ್ಟು ದೈವವಿಲ್ಲ.

(೩೩) ಸೆಟ್ಟಿ ಎಂಬೆನೇ ಸಿರಿಯಾಳನ? ಮಡಿವಾಳನೆಂಬೆನೇ ಮಾಚಯ್ಯನ? ಡೋಹರನೆಂಬೆನೇ ಕಕ್ಕಯ್ಯನ? ಮಾದಿಗನೆಂಬೆನೇ ಚನ್ನಯ್ಯನ? ಆನು ಹಾರುವನೆಂದೊಡೆ ಕೂಡಲಸಂಗಯ್ಯ ನಗುವನಯ್ಯ.

(೩೪) ನಡೆನುಡಿ ಸಿದ್ಧಾಂತವಾದಲ್ಲಿ ಕುಲಹೊಲೆ ಇಲ್ಲ. ನುಡಿ ಲೇಸು ನಡೆಯಧಮವಾದಲ್ಲಿ, ಅದೇ ಬಿಡುಗಡೆ. ಇಲ್ಲದ ಹೊಲೆ ಕಳವು ಪರದಾರಂಗಳಲ್ಲಿ ಹೊಲಬನರಿಯದೆ ಕೆಟ್ಟು ನಡೆವುತ್ತ ಮತ್ತೆ ಕುಲಜ ರೆಂಬ ಒಡಲುಂಟೇ? ಆಚಾರವೇ ಕುಲ ಅನಾಚಾರವೇ ಹೊಲೆ.

ಇಂತೀ ಉಭಯವ ತಿಳಿದು ಅರಿಯಬೇಕು. ಕಯ್ಯುಳಿಗತ್ತಿ ಕೆಡೆಯಾಗ ಬೇಡ, ಅರಿನಿಜಾತ್ಮ ರಾಮ ರಾಮನಾ.

(೩೫) ಕೊಲ್ಲುವನೇ ಮಾದಿಗನು. ಹೊಲಸು ತಿಂಬುವನೇ ಹೊಲೆಯ. ಕುಲವೇನೋ? ಆವಂದಿರ ಕುಲವೇನೋ? ಸಕಲ ಜೀವಾತ್ಮ ರಿಗೆ ಲೇಸನೇ ಬಯಸುವರು ನಮ್ಮ ಕೂಡಲಸಂಗನ ಶರಣರೆಲ್ಲ ಕುಲಜರು.

(೩೬) ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಇದು ಕಾರಣ ನಮ್ಮ ಗುಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ ಸತ್‌ಕ್ರಿಯಾ ಚರಣೆಯೇ ಸಾಧನ ಕಾಣಿ ಭೋ.

(೩೭) ಫಲಪದದ ಆಶೆ ಮಾಡಲಾಗದು ನಿನ್ನ ಕ್ರಿಯೆಯಲ್ಲಿ. ಅದೇನು ಕಾರಣವೆಂದರೆ, ಬಯಕೆಯ ಭಕ್ತಿಯ ಪೂರ್ವ ಪುರಾತನರು ಮೆಚ್ಚನು ನಮ್ಮ ಅಖಂಡೇಶ್ವರ ದೇವರು ಹಂಗಿನ ಭಕ್ತರನೊಲ್ಲ ನೋಡಾ.

(೩೮) ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ ಎನ್ನೊಡಲಿಂಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ. ಧನಿಯ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿ ವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ. ಕೊಡಲವ್ಮನು. ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದ ಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನೊಡಲವಸರಕ್ಕೆ ಕುದಿವೆ ನಾದೊಡೆ ತಲೆದಂಡ ತಲೆದಂಡ ಕೂಡಲಸಂಗಮದೇವಯ್ಯ.

(೩೯) ಚಿರಂಜೀವಿ ಎಂದರೆ ನಿರೋಗಿ. ಚಿರಂಜೀವಿ ಎಂದರೆ ಸಶಕ್ತನು. ಚಿರಂಜೀವಿ ಎಂದರೆ ಬಹುಕಾಲ ಬದುಕುವವನು. ಚಿರಂಜೀವಿ ಎಂದರೆ ಪ್ರಳಯವ ಮೀರುವವನಲ್ಲ. ದೇಹ ಚಿರಂಜೀವಿಯಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನ ಬ್ರಹ್ಮವೆಂಬ ಶಬ್ದ ಬೇರುಂಟೇ?

(೪೦) ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡು ಮುರಿದು ತಲೆ ನಡುಗಿ

ನರೆ ತೆರೆ ಹೆಚ್ಚಿ, ಮತಿಗೆಟ್ಟ ಒಂದನಾಡ ಹೋಗಿ ಒಂಬತ್ತನಾಡ
ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು ಘನವ ಬೆರಸಿ ಹಿರಿ
ಕಿರಿದೆಂಬ ಭೇದವ ಮರೆದು ಕೂಡಲಚೆನ್ನಸಂಗಯ್ಯನಲ್ಲಿ ಬೆರಸಿ ಬೆ
ಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು.

(೪೧) ನಾನು ಘನ ತಾನು ಘನನೆಂಬ ಹಿರಿಯರುಂಟೇ ಜ
ದೊಳಗೆ? ಹಿರಿಯರ ಹಿರಿಯತನದಿಂದೇನಾಯಿತ್ತು? ಹಿರಿದು ಕಿರಿದೆಂ
ಶಬ್ದವಡಗಿದರೆ ಆತನೇ ಶರಣ ಗುಹೇಶ್ವರಾ.

(೪೨) ಸ್ತ್ರೀಯರ ಕಂಡು ಅಳುಪದಿರಾ ಮನವೇ. ಉದ್ದಂಡತ
ದಲ್ಲಿ ನಡೆವ ಭಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನ
ದೇವರಾಯ ಸೊಡ್ಡಳಾ?

(೪೩) ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು.
ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು. ತಾ ಮಾಡಿದ ಹೆ
ನಾರಾಯಣನ ಎದೆಯನೇರಿತ್ತು. ಅದು ಕಾರಣ ಹೆಣ್ಣು ಹೆಣ್ಣ
ಹೆಣ್ಣು ರಾಕ್ಷಸಿಯಲ್ಲ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ.

(೪೪) ಶಿವಭಕ್ತರು ನಿಜ ಕೈಲಾಸಕ್ಕೆ ಹೋದೊಡೆ, ಅವರರಸಿ
ಪಾರ್ವತಿಯ ಸರಿ ಎಂದು ಕಾಣಬೇಕು. ಅಲ್ಲಿ ಅನುಸರಣೆಯ ಕೊಳ
ಬೆರಸಿ ಮಾತನಾಡುವ ನರಕಿಗಳನೇನೆಂಬೆ ರಾಮನಾಥಾ?

(೪೫) ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು. ಸತಿ
ಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರಸಿದಂತೆ ಕಾ
ರಾಮನಾಥಾ.

(೪೬) ಉಭಯ ದೃಷ್ಟಿಯಿಂದೆ ದೃಷ್ಟವ ಕಾಂಬಂತೆ ದಂ
ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು.

(೪೭) "ಇತ್ತ ಬಾ" ಎನ್ನದವನ ಹತ್ತೆ ಹೊದ್ದಲು ಬೇಡ. "ಇತ್ತ ಬ
ಎಂದ ಸದ್ಭಕ್ತನ ಮನೆಯ ಬಾಗಿಲ ಹೆತ್ತಿರ್ಪೆ ಕಾಣಾ ರಾಮನಾಥಾ.

(೪೮) ಅರಿಯದವರೊಡನೆ ಸಂಗವಮಾಡಿದರೆ ಕಲ್ಲು ಹೊಯ
ಕಿಡಿಯ ತೆಗೆದುಕೊಂಬಂತೆ. ಬಲ್ಲವರೊಡನೆ ಸಂಗವಮಾಡಿದರೆ ಹೊಸೆ

ಬೆಣ್ಣೆಯು ತೆಗೆದುಕೊಂಬಂತೆ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರ ಸಂಗ ಕರ್ಪುರಗಿರಿಯು ಉರಿಯು ಕೊಂಬಂತೆ.

(೪೯) ಎನ್ನವರೊಲಿದು ಹೊನ್ನಶೂಲದಲಿಕ್ಕಿದರು, ಎನ್ನ ಹೊಗಳಿ ಹೊಗಳಿ. ಎನ್ನ ಹೊಗಳತೆ ಎನ್ನ ಮೈಗೊಂಡಿತಲ್ಲಾ! ಅಯ್ಯಾ ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ! ಅಯ್ಯಾ ನೊಂದೆನು, ಸೈರಿಸ ಲಾರೆನು. ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ ಎನ್ನ ಹೊಗ ಳತೆಗಡ್ಡ ಬಾರಾ ಧರ್ಮಿ.

(೫೦) ಅಯ್ಯಾ ಮರಮರ ಮಥನದಿಂದೆ ಅಗ್ನಿ ಹುಟ್ಟಿ ಆ ಮರನೆ ಲ್ಲವ ಸುಡದಿಪ್ಪುದೇನಯ್ಯ? ಮಹಾನುಭಾವರ ಘನಮಥನದಿಂದ ಜ್ಞಾನಾಗ್ನಿ ಪುಟ್ಟಿ ಎನ್ನ ತನುಗುಣ ಎನ್ನ ಮರಣ ನಾಸ್ತಿ. ಎನ್ನ ಪ್ರಾಣ ಗಳು ಸುಡದಿಪ್ಪವೇ ಅಯ್ಯಾ? ಇದು ಕಾರಣ ಕೂಡಲಸಂಗಮದೇವ ನಿಮ್ಮ ಮಹಾನುಭಾವರ ಸಂಗವನೆ ಕರುಣಿಸಯ್ಯ.

(೫೧) ಭಕ್ತನ ಮಠವೆಂದು ಭಕ್ತ ಹೋದೊಡೆ ಆ ಭಕ್ತ ಭಕ್ತಂಗೆ ಅಡಿಯಿಟ್ಟು ಇದಿರೆದ್ದು ನಡೆದು ಹೊಡೆಗೆಡೆದು ಒಡಗೊಂಡು ಬಂದು ವೀಳೆಯವನಿಕ್ಕಿ ಸಮಯವರಿತು ಓಲಾಡುತಿರ್ಪುದೇ ಭಕ್ತಿ. ಹೀಗಲ್ಲದೆ ಬೆಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪನ ಮನೆಯು ಸನುಮತರು ಹೊಗರು ಕಾಣಾ ರಾಮನಾಥಾ.

(೫೨) ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು? ಅದು ಪಟ್ಟಣವೆಂದೆನಿಸುವುದು. ನಿಷ್ಠೆ ಇಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ.

(೫೩) ಮಾರುತನಂತೆ ಮನ, ಮರಾಳನಂತೆ ಬುದ್ಧಿ, ಸಂಚಲಿ- ಸವ ಅಂಬುಧಿಯಂತೆ ಅಂಗ, ಮೊಳೆದೋರದ ವೃಕ್ಷದಂತೆ ಸಲೆ ಸಂದಿಹ ಜ್ಞಾನ, ಬಲುಗಯ್ಯನ ತೋಟಿಯ ತೊಡಕಿನಂತೆ ಇಂದ್ರಿಯ ವರ್ಗಾದಿ ಗಳ ಗೆಲವು, ಆತನೇ ಆತುರವೈರಿ ಮಾರೇಶ್ವರ.

(೫೪) ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ. ಅರೆದು ನೋಡುವ ಚಂದನದಂತೆ. ಅರಿದು ನೋಡುವ ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದರೆ ಕರವಿ- ಡಿದೆತ್ತಿಕೊಂಬ ನಮ್ಮ ರಾಮನಾಥನು.

(೫೫) ಆರು ಇಲ್ಲದವಳೆಂದು ಅಳಿಗೊಳಲುಬೇಡ ಕಂಡಯ್ಯ. ಏನ
ಮಾಡಿದಡೂ ನಾನಂಜುವಳಲ್ಲ. ತರಗೆಲೆಯ ಮೆಲ್ಲಿದ್ದು ನಾನಿಹೆನು
ಸುರಿಗಿಯ ಮೇಲೊರಗಿ ನಾನಿಹೆನು. ಚನ್ನಮಲ್ಲಿಕಾರ್ಜುನಯ್ಯ ಕ
ಕೆಡೆ ನೋಡಿದಡೆ ಒಡಲನು ಪ್ರಾಣನು ನಿಮಗೊಪ್ಪಿಸಿ ಶುದ್ಧಳಹೆನು

(೫೬) ಕಿಡಿ ಕಿಡಿ ಕೆದರಿದರೆ ಎನಗೆ ಹಸಿವು ತೃಷೆ ಅಡಗಿತೆಂಬೆನು
ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲ
ಬಿದ್ದರೆ ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯ, ಶಿರ ಹರಿದು
ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು.

(೫೭) ಕಾಯದ ಕಳವಳಕಂಜಿ ಕಾಯಯ್ಯಾ ಎನ್ನೆನು. ಜೀವ
ನೋಪಾಯಕ್ಕಂಜಿ ಈಯಯ್ಯಾ ಎನ್ನೆನು. ಉರಿ ಬರಲಿ, ಸಿರಿ ಬರಲಿ. ಬೇಕು,
ಬೇಡೆನ್ನನಯ್ಯ. ಆನು ನಿಮ್ಮ ಹಾರೆನು, ಮಾನವರ ಬೇಡೆನು. ಆಣೆ
ನಿಮ್ಮಾಣೆಯಯ್ಯ ಕೂಡಲಸಂಗಮದೇವಾ.

(೫೮) ಓಡುವಾತ ಲೆಂಕನಲ್ಲ. ಬೇಡುವಾತ ಭಕ್ತನಲ್ಲ. ಓಡಲಾ
ಗದು ಲೆಂಕನು. ಬೇಡಲಾಗದು ಭಕ್ತನು. ಓಡೆನಯ್ಯ, ಬೇಡೆನಯ್ಯ
ಕೂಡಲಸಂಗಮದೇವಾ.

(೫೯) ಎಲ್ಲರೂ ವೀರರು, ಎಲ್ಲರೂ ಧೀರರು, ಎಲ್ಲರೂ ಮಹಿ
ಮರು, ಎಲ್ಲರೂ ಪ್ರಮಥರು. ಕಾಳಗದ ಮುಖದಲ್ಲಿ ಕಾಣಬಹುದು.
ಓಡುವ ಮುಖದಲ್ಲಿ ಕಾಣಬಾರದು. ನಮ್ಮ ಕೂಡಲಸಂಗನ ಶರಣರು
ಧೀರರು.

(೬೦) ಪುಣ್ಯಪಾಪವಿಲ್ಲಾಗಿ ಯಮನ ಹಂಗಿಲ್ಲ. ಬಂದುದನುಂಬು
ದಾಗಿ ಮಾನವರ ಹಂಗಿಲ್ಲ. ಭವಗೆಟ್ಟಿನಾಗಿ ದೈವದ ಹಂಗಿಲ್ಲ. ಸತ್ಯ
ಜ್ಞಾನಾನಂದವೇ ತಾನಾಗಿ ಇನ್ನಾರ ಹಂಗಿಲ್ಲದಾತ ಗುಹೇಶ್ವರ.

(೬೧) ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೇ?
ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನ ಉಳ್ಳಡೆ ಒಡೆಯದೇ?
ಭಕ್ತರಿಗೆ ಬಡತನವಿಲ್ಲ, ಸತ್ಯರಿಗೆ ದುಷ್ಕರ್ಮವಿಲ್ಲ. ಎನಗೆ ಮಾರಯ್ಯ
ಪ್ರಿಯ ಅಮಳೇಶ್ವರ ಲಿಂಗ ಉಳ್ಳನ್ನಕ್ಕರ ಎನಗಾರ ಹಂಗಿಲ್ಲ.

(೬೨) ಮನೆ ನೋಡಾ ಬಡವರ ಮನೆ. ಮನ ನೋಡಾ ಘನ. ಘನ ನೋಡಾ ಬಡವರು. ಘನಮನ ಸಂಪನ್ನರು. ಕೂಡಲಸಂಗನ ಶರಣರು ಆರಿಗೂ ಉಪಮಿಸಬಾರದು.

(೬೩) ಬಿರುಗಾಳಿ ಬೀಸಿ ಮರ ಮುರಿವಂತೆ ಸುಳುಹ ಸುಳಿಯದೆ. ತಂಗಾಳಿ ಪರಿಮಳದೊಳಗೂಡಿ ಸುಳಿವಂತೆ ಸುಳಿಯಬೇಕು. ಸುಳಿದಡೆ ನೆಟ್ಟನೆ ಭಕ್ತನಾಗಿ ನಿಲಬೇಕು. ನಿಂದು ಭಕ್ತನಾಗಲರಿಯದ ಭ್ರಷ್ಟರನೇನೆಂಬೆ ಗುಹೇಶ್ವರಾ?

(೬೪) ಭಾವ ಭ್ರಮೆವಂತರು ಬಾರದಿರಿ. ಜ್ಞಾನಹೀನರು ಬೇಗ ಹೋಗಿರಿ. ತ್ರಿವಿಧಮಲಕ್ಕೆ ಕಚ್ಚಿ ಮುಟ್ಟಿ ಹೊಡೆದಾಡುವರು ಅತ್ತಲಿರಿ. ನಿರುತಸ್ವಾನುಭಾವರು ಬನ್ನಿ. ಸನ್ಮಾರ್ಗ ಕ್ರಿಯಾವಂತರು ಬನ್ನಿ ಎಂದು ಎನಗೆ ಕೊಟ್ಟ ಕಾಯಕ ಕೂಡಲಸಂಗಮದೇವರಲ್ಲಿ ಬಸವಣ್ಣ.

(೬೫) ತವನಿಧಿ ಬೆಳೆದವಂಗೆ ಕಣಜದ ಹಂಗುಂಟೇ? ಕಾಯಕವ ಮಾಡುವ ಭಕ್ತಂಗೆ ಇನ್ನಾರ ಕಾಡಲೇತಕ್ಕೋ? ಆ ಗುಣ ಅಮಳೇಶ್ವರಲಿಂಗಕ್ಕೆ ದೂರ.

(೬೬) ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧನಾಗಿ ಕಾಯಕವ ಮಾಡುವಲ್ಲಿ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮಳೇಶ್ವರಲಿಂಗದ ಸೇವೆಯುಳ್ಳನ್ನಕ್ಕರ.

(೬೭) ಹುಟ್ಟ ಮೆಟ್ಟೆಂಬುದು ನಿಮ್ಮಲ್ಲಿಲ್ಲ. ನಿಮ್ಮಿಂದ ನೀವೇ ಸ್ವಯಂಭುವಯ್ಯ. ಇಂತಾದಿರಯ್ಯ ಇಂತಾದಿರಯ್ಯ ನೀವಿಂತಾದಿರಯ್ಯ. ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಿ ನಿಜಗುರು ಕಪಿಲಸಿದ್ಧಮಲ್ಲಿನಾಥಯ್ಯ.

(೬೮) ತಾಯಿ ತಂದೆ ಇಲ್ಲದ ಕಂದಾ ನಿನಗೆ ನೀನೇ ಹುಟ್ಟಿ ಬೆಳೆದೆಯಲ್ಲಾ! ನಿನ್ನ ಪರಿಣಾಮವೇ ನಿನಗೆ ಪ್ರಾಣ ತೃಪ್ತಿಯಾಗಿ ಇದ್ದೆಯಲ್ಲಾ! ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲಾ! ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ.

(೬೯) ಅಡಗನೊಳಗಣ ಹಾಲು ಅಡಗಿಪ್ಪ ಭೇದವನು ಬೆಡಗಪ್ಪ ತುಪ್ಪದ ಕಂಪಿನ ಪರಿಯಂತೆ, ಎಲೆ ಮೃಡನೇ ನೀನು ಪ್ರಾಣ ಪ್ರಕೃತಿಗಳೊಳಗೆ ಅಡಗಿಹ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?

(೭೦) ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯ. ಎಣಿಸುವೊಡೆ ತನು ಭಿನ್ನ, ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿರ್ಪೆನಯ್ಯ ರಾಮನಾಥಾ.

(೭೧) ವಿಶ್ವದೊಳಗೆಲ್ಲ ನೀನೇ ದೇವಾ. ವಿಶ್ವಭರಿತನು ನೀನೇ ದೇವಾ. ವಿಶ್ವರೂಪನು ನೀನೇ ದೇವಾ ವಿಶ್ವಪತಿ ನೀನೇ ದೇವಾ. ವಿಶ್ವಾತೀತನು ನೀನೇ ದೇವಾ ಅಖಂಡೇಶ್ವರಾ.

(೭೨) ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ಪಿಶ್ವತೋ ಬಾಹು ನೀನೇ ದೇವಾ. ವಿಶ್ವತೋಪಾದ ನೀನೇ ದೇವಾ ಕೂಡಲಸಂಗಮದೇವಾ.

(೭೩) ಗಿರಿಗಳ ಗುಹೆಗಳ ಕಂದರದಲ್ಲಿ ನೆಲಹೊಲದಲ್ಲಿ ಇಪ್ಪೆ ದೇವಾ. ಎಲ್ಲಿ ನೋಡಿದಡಲ್ಲಿ ಇಪ್ಪೆ ದೇವಾ. ಮನಕ್ಕಗಮ್ಯ ಅಗೋಚರವಾಗಿ ಅಲ್ಲಲ್ಲಿ ಎಲ್ಲಿಯೂ ನೀನೇ ಇಪ್ಪೆಯಯ್ಯ ಗುಹೇಶ್ವರಾ.

(೭೪) ವನವೆಲ್ಲ ನೀವೇ. ವನದೊಳಗಣ ದೇವತರುವೆಲ್ಲ ನೀವೇ. ತರುವಿನೊಳಗಾಡುವ ಮೃಗವೆಲ್ಲ ನೀವೇ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

(೭೫) ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ?

(೭೬) ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ, ಕಾಯ ಜೀವವುಳ್ಳಲ್ಲಿಯೇ ಪೂಜಿಸದ ಅನ್ಯಾಯಿಗಳನೇನೆಂಬೆ ಹೇಳಾ ರಾಮನಾಥಾ?

(೭೭) ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ಹೇಳಾ ರಾಮನಾಥಾ?

(೭೮) ಇಂತೆಂದ ಭೂಮಿಯು, ಇಂತೆಂದ ಗಗನವ ಇಂತೆಂದ ಸಪ್ತ ಸಾಗರವ, ಇಂತೀ ಲೋಕದೊಳಗೆ ತಿಂಥಿಣಿಯಾಗಿಪ್ಪ ಅಚಿಂತ್ಯನನಾರು ಬಲ್ಲರೈ ರಾಮನಾಥಾ?

ನೆಲಕ್ಷೇತ್ರ? ೮೧

(೭೯) ನೆಲದೀಪದೊಡೆಯನು, ಜಲತಂಪಿನೊಡೆಯನು, ಅಗ್ನಿ ಉಷ್ಣದೊಡೆಯನು, ಚಂದ್ರಕಾಂತದೊಡೆಯನು, ಸೂರ್ಯಕಾಂತದೊಡೆಯನು, ಸಕಲ ದೇವಂಗಳಿಗೆ ಆಯುಷ್ಯ ಭಾಷೆಯ ಕೊಟ್ಟ ಭೋಗದೊಡೆಯನು ಜಗತ್ಪ್ರಭು ಸೊಡ್ಡಳಾ.

(೮೦) ಸಹಸ್ರ ಶೀರ್ಷನಾದಿ ಪುರುಷನು. ತ್ರಿಪಾದೂರ್ಧ್ವ ಪುರುಷನೊಬ್ಬ ಪುರುಷನು, ಉದನ್ಮುಖನೊಬ್ಬ ಪುರುಷನು, ಉದಯ ಪುರುಷನೊಬ್ಬ ಪುರುಷನು, ಆದಿ ಪುರುಷನೊಬ್ಬ ಪುರುಷನು, ತದ್ವಿಯತ್ಪುರುಷನು, ಪುರುಷನಿಲ್ಲದ ಪ್ರಭೆಯ ನೋಡಿರೇ. ವೇದನಾದಾತೀತ ತುರೀಯ ಪರಮಾನಂದ ನಿರವಯ ಷಟ್ತ್ರಿಂಶತ್ ಪ್ರಭಾ ಪಟಲದ ಬೆಳಗಿದೆ ನೋಡಿರೋ. ಬೆಳಗಿನೊಳಗಿನ ಮಹಾ ಬೆಳಗಿನ ಬೆಳಗು ನಮ್ಮ ಕೂಡಲಸಂಗಯ್ಯ.

(೮೧) ಆದ್ಯರ ವಚನ ಪರುಷ ಕಂಡಯ್ಯ. ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನ ಬೇವ ಸವಿದಂತೆ.

(೮೨) ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೇ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಬಂಡಿಗೆ ಮೃಡ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ.

(೮೩) ಕರಿಯನಿತ್ತೊಡೆ ಒಲ್ಲೆ. ಸಿರಿಯನಿತ್ತೊಡೆ ಒಲ್ಲೆ. ಹಿರಿದಪ್ಪ ರಾಜ್ಯವಿತ್ತೊಡೆ ಒಲ್ಲೆ. ನಿಮ್ಮ ಶರಣರ ಸೂಳು ನುಡಿಯ ಒಂದರಗಳಿಗೆ ಇತ್ತೊಡೆ ನಿನ್ನನಿತ್ತೆ ಕಾಣಾ ರಾಮನಾಥಾ.

(೮೪) ಹಾಲ ತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ನೊರೆ ತೆರೆಗಳು, ಇಂತಪ್ಪ ಆದ್ಯರ ವಚನ ನಿರಲು ಬೇರೆ ಬಾವಿಯ ತೋಡಿ ಉಪ್ಪನೀರ ಸವಿದಂತಾಯಿತ್ತಯ್ಯ ಎನ್ನ ಯುಕ್ತಿ. ನಿಮ್ಮ ವಚನಂಗಳ ಕೇಳದೆ ಅನ್ಯಪುರಾಣಂಗಳ ಕೇಳಿ ಕೆಟ್ಟೆನಯ್ಯ ಕೂಡಲಸಂಗಮದೇವಾ.

---

# ಕನ್ನಡ ವಚನಕಾದಂಬರಿ.

ಉತ್ತರ ದೇಶದಲ್ಲಿ ನೇತ್ರಾವತಿಯೆಂಬ ನದಿಯ ತೀರದಲ್ಲಿ ಇರು
ವಿದಿಶಾಪಟ್ಟಣದಲ್ಲಿ ಸಮಸ್ತಗುಣಸಂಪನ್ನನಾದ ಶೂದ್ರಕನೆಂಬ ಅರ
ಧರ್ಮದಲ್ಲಿ ರಾಜ್ಯವನಾಳಿಕೊಂಡಿದ್ದು ಒಂದು ದಿನ ಹಗಲೋಲಗವಾ
ಹಜಾರದಲ್ಲಿ ಇರುವ ಸಮಯದಲ್ಲಿ ದಕ್ಷಿಣದೇಶದಿಂದ ಮಾತಂಗಕನ್ನಿ
ಯೊಬ್ಬಳು ಒಬ್ಬ ಮುದುಕನ ಮುಂದಿಟ್ಟುಕೊಂಡು ಮತ್ತೊಬ್ಬ ಸಣ್ಣವ
ಕೈಯಲ್ಲಿ ಗಿಣಿ ಸಹ ಪಂಜರವನು ಹೊರಿಸಿಕೊಂಡು ಬಂದು ಅರಸಿ
ಕೈಮುಗಿದು ಕೆಳಕ್ಕೆ ನಿಂತಲ್ಲಿ ಆ ಮುದುಕನು ಗಿಣಿಯ ಪಂಜರವ
ಅರಸಿನ ಮುಂದಿರಿಸಿ--- ದೇವರು, ಈ ಗಿಣಿಯು ಸಂಗೀತಸಾಹಿತ್ಯ
ಬಲ್ಲುದು; ರಾಜನೀತಿಯರಿತು ಸಮಯೋಚಿತವಾಗಿ ಮಾತನಾಡಬಲ್ಲುದ
ಅಂತಃಪುರಸ್ತ್ರೀಯರುಗಳ ಕೋಪವ ತಿಳುಹಿಸಿ ಅನುಗೊಳಿಸಬಲ್ಲುದ
ಇಂತಹ ಗಿಣಿಯು ದೇವರ ಸಮ್ಮುಖಕ್ಕೆ ಸಲುವುದು ಎಂದು ತಮ್ಮೊಡೆಯ
ಮಗಳು ತಂದುಕೊಂಡು ಇದ್ದಾಳೆ. ಇದು ಅರಮನೆಗೆ ಇರಲಿ ಎಂ
ಒಪ್ಪಿಸಿದಳು- ಎಂದನು.

ಆ ಮೇಲೆ ಆ ವೈಶಂಪಾಯನನೆಂಬ ಗಿಣಿಯು ಅರಸಿನ ಮುಖ
ನೋಡಿ ಬಲದ ಕೈಯಲ್ಲಿ ಜಯಜಯ ಎಂದು ಉಗ್ಗಡಿಸಿ, ಅಕ್ಷರಸ್ಪ
ವಾಗಿ ಸುಸ್ವರದಲ್ಲಿ ಬಿರುದಾವಳಿಯ ಪದ್ಯವನೋದಲಾಗಿ, ಕೇಳಿ ಅರ
ಬಹಳವಾಗಿ ಸಂತೋಷವಂ ಪಟ್ಟು ಆಶ್ಚರ್ಯಗೊಂಡು ಸಮೀಪದಲ್ಲಿ ಕುಮ
ರಪಾಲಿತನೆಂಬ ಮಂತ್ರಿಯೊಡನೆ ಬಹು ಹೊತ್ತು ಆ ಗಿಣಿಯ ವಿಷ
ವಾದ ಪ್ರಸಂಗವನ್ನೇ ಆಡಿಕೊಂಡಿದ್ದು, ಆಬಳಿಕ ಓಲಗವು ಹರಿಪ
ಸಕಲರು ಕಳುಹಿಸಿಕೊಂಡು ಹೋದ ಮೇಲೆ ಆ ಮಾತಂಗ ಕನ್ಯೆಯನ
ಕಳುಹಿಸಿ ಅಂತಃಪುರಕ್ಕೆ ಹೋಗುವಾಗ ಆ ಗಿಣಿಯನ್ನು ಸಂಚೆಯ
ಗದವಳ ಕೈಯಲ್ಲಿ ಕೊಟ್ಟು, ಕೆಲವು ಅಪ್ತರು ಅರಸುಮಕ್ಕಳು ಊ
ಗದವರು ಸಹ ಗರುಡಿಗೆ ಬಂದು ಹವಣಾಗಿ ಸಾಧಕವಂ ಮಾ
ಆಮೇಲೆ ಮೀಣದ ಮನೆಗೆ ಬಂದು, ಅಂತಃಪುರದ ಸ್ತ್ರೀಯರುಗಳಿಂದಂತ
ಗಂಧೋದಕ ತೀರ್ಥೋದಕಗಳಿಂದ ಸ್ನಾನವಂ ಮಾಡಿ ಮಡಿಯು

ಮಧ್ಯಾಹ್ನ ಕರ್ಮವನು ನಡೆಯಿಸಿ, ದೇವರ ಪೂಜೆಯನ್ನು ಮಾಡಿ, ಅಲಂಕಾರ ಮಂಟಪದಲ್ಲಿ ಪರಿಮಳ ಒಡವೆಗಳ ಧರಿಸಿಕೊಂಡು, ಭೋಜನದ ಮನೆಯಲ್ಲಿ ಭೋಜನವಂ ಮಾಡಿ, ಅವಸರದ ಊಳಿಗದವಳ ಕೈಲಾಗ ತೆಗೆದುಕೊಂಡು, ಒಳಹಜಾರಕ್ಕೆ ಬಂದು, ಸಿಂಹಾಸನದ ಸಮೀಪದಲ್ಲಿ ನೆಲದ ಮೇಲೆ ಕುಳಿತುಕೊಂಡು ಕತ್ತಿಯನ್ನು ತೊಡೆಯ ಮೇಲೆ ಇರಿಸಿಕೊಂಡು ಮೃದುವಾಗಿ ಪಾದವ ಒತ್ತುತ್ತಿರುವ ಕತ್ತಿಯ ಊಳಿಗದವಳೊಡನೆ ಒಂದೊಂದು ಮಾತನಾಡುವ ಸಮಯದಲ್ಲಿ ಆ ಗಿಣಿಯ ಪ್ರಸಂಗವ ಕೇಳಬೇಕೆಂಬ ಸಂತೋಷದಿಂದ ಅವಸರದ ಊಳಿಗದವಳ ಮುಖವ ನೋಡಿ ಗಿಣಿಯ ತರಹೇಳಲಾಗಿ ಅಂತಃಪುರದಿಂದ ಗಿಣಿಯನು ತರುವಲ್ಲಿ ಅಣ್ಣಾಗಳು ಬಂದು ಕೈಮುಗಿದು— ಸ್ವಾಮೀ! ಅಮ್ಮನವರು ಬಿನ್ನಹವಂ ಮಾಡಿದರುಃ— ದೇವರವರು ಕಟ್ಟುಮಾಡಿಸಿದ ಪ್ರಕಾರಕ್ಕೆ ವೈಶಂಪಾಯನಿಗೆ ಹಣ್ಣುಹಂಪಲ ಮೆಲ್ಲಿಸಿ ಇರಿಸಿಕೊಂಡಿದ್ದಲ್ಲಿ ಅವಸರದವಳು ಬಂದು ಕೇಳಲಾಗಿ ಪಾದದ ಬಳಿಗೆ ಕಳುಹಿಸಿಬಿಟ್ಟು ಇದ್ದೇವೆ, ಎಂದು ಬಿನ್ನಹವಂ ಮಾಡಿದರುಃ— ಎಂದು ಕೈಮುಗಿದು ಹೋದಲ್ಲಿ; ಆ ಅರಸು ಗಿಣಿಯನ್ನು ನೋಡಲಾಗಿ— ಸ್ವಾಮೀ! ಅಂತಃಪುರದಲ್ಲಿ ಅರಸಿತಿಯರು ದಿವ್ಯವಾಗಿರುವ ನೇರಳೆಯ ಹಣ್ಣು, ಮಾವಿನ ಹಣ್ಣು, ದಾಳಿಂಬದಹಣ್ಣು, ಮುಂತಾದುವನು ತಂದು ಕೈಯಿಂದ ತೆಗೆದುಕೊಡಲಾಗಿ ಮೆಲ್ದು ಅಮೃತಾಸ್ವಾದನವ ಮಾಡಿದಹಾಗೆ ಆಯಿತು, ಎಂದು ಬಹುಸ್ತುತಿಯನ್ನು ಮಾಡುತ್ತಿರಲಾಗಿ; ಆ ಪ್ರಸಂಗವನ್ನು ಅಷ್ಟರಲ್ಲೇ ನಿಲ್ಲಿಸಿ— ನೀನು ಆವ ದೇಶದಲ್ಲಿ ಇದ್ದೆ; ಆವ ರೀತಿಯಲ್ಲಿ ಸಕಲ ವಿದ್ಯೆಗಳು ಬಂದುವು; ಆವ ಬಗೆಯಲ್ಲಿ ಪಂಜರಕ್ಕೆ ಸಿಕ್ಕಿದೆ; ಏತರಿಂದ ಹೀನಜಾತಿಯ ಕೈಗೆ ಸೇರಿದೆ? ಎಂದು ಕೇಳಲಾಗಿ; ವೈಶಂಪಾಯನು ತಾನು ಬಿನ್ನಹವಂ ಮಾಡುತ್ತಿದ್ದೀತುಃ—

ಸ್ವಾಮೀ! ಹೊಳೆಯ ಪಡುವಣ ತೀರದಲ್ಲಿ ಪೂರ್ವದಲ್ಲಿ ರಾಮಸ್ವಾಮಿಯು ಕೆಡಹಿದ ಸಪ್ತತಾಳವೃಕ್ಷದ ಸಮೀಪದಲ್ಲಿ ದೊಡ್ಡಿತಾದ ಎಲವದ ಮರದ ಮೇಲೆ ಅನೇಕ ಗಿಣಿಗಳಿರುವವು. ಅವರಲ್ಲಿ ನಮ್ಮ ತಂದೆತಾಯಿಗಳ ಮುಪ್ಪಿನ ಕಾಲದಲ್ಲಿ ತಾನೊಂದು ಹುಟ್ಟಲಾಗಿ ಆ ಪ್ರಸವವೇದನೆಯಿಂದ ಮುಪ್ಪಿನ ತಾಯಿ ದೈವಾಧೀನವಾಗಲಾಗಿ, ತನ್ನ ಮುಪ್ಪಿನ ತಂದೆಯು ಅನುಕೂಲ ಸ್ತ್ರೀಯ ವಿಯೋಗದಿಂದ ಬಹು ದುಃಖಿ

ತನಾಗಿದ್ದನು. ಪುತ್ರವಾತ್ಸಲ್ಯದಿಂದ ಆ ದುಃಖವನ್ನು ಮರೆತು ನನ್ನನ್ನು ಸಾಕಿಕೊಂಡಿರಲಾಗಿ, ಒಂದಾನೊಂದು ದಿನ ಸೂರ್ಯೋದಯಕಾಲದಲ್ಲಿ ಗಿಣಿಗಳೆಲ್ಲವು ಮೇವುವಕ್ಕೆ ಹೋಗಿ ಹಾರಲರಿಯದ ಮರಿಗಳು ಮಾತ್ರವೇ ಇರುವ ಸಮಯದಲ್ಲಿ ನನ್ನ ಗೂಡಿನಲ್ಲಿ ವೃದ್ಧಾಪ್ಯದಿಂದ ಹಾರಲರಿಯದೆ ನಮ್ಮ ತಂದೆಯು ಸಮೀಪದಲ್ಲಿ ಇರುವಲ್ಲಿ ಬೇಟೆಗಾರರ ಗಲಗು ಕೇಳಿ ಸಲಾಗಿ ನಾನು ಭಯದಿಂದ ನಮ್ಮ ತಂದೆಯ ರೆಕ್ಕೆಯೊಳಗೆ ಹೊಕ್ಕು ಇದ್ದು ಆ ಗಲಗೇನೆನುತ್ತ ಮೇಲಕ್ಕೆ ಬಂದು ನೋಡಲಾಗಿ, ಆ ಬೇಡರು ಮಾತಂಗನೆಂಬ ಗುರಿಕಾರ ಸಹ ಬಿಸಲಿಗಾರದೆ ನಾವಿರುವ ಎಲವ ಮರದ ನೆಳಲ ಸೇರಿ ಬಳಲಿಕೆಯ ತೀರಿಸಿಕೊಂಡು ಹೋದಮೇಲೆ ಒಬ್ಬ ಮುದಿಬೇಡನು ಬೇಟೆ ಸಿಕ್ಕದೆ ಇದ್ದುದರಿಂದ ಹಿಂದುಳಿದು ಅಲ್ಲಿಯೇ ನಿಂತು ಮರದ ಮೇಲಕ್ಕೇರಿ ಮರಿಗಳ ತೆಗೆದು ಕೊರಳ ಮುರಿದು ಕೆಳಕ್ಕಿಡುವುದನು ಕಂಡು ಭಯದಿಂದ ನಮ್ಮ ತಂದೆಯು ಭರದಿಂದ ನನ್ನನ್ನು ಹೊಟ್ಟೆಯೊಳಗಿಟ್ಟುಕೊಂಡಿರುವ ಸಮಯದಲ್ಲಿ, ಆ ಬೇಡನು ನಮ್ಮ ತಂದೆಯ ಕೊರಳ ಮುರಿದು ಇಟ್ಟುಬಿಡುವಾಗ ಆಯುಷ್ಯದಿಂದ ಆವನ ಕಣ್ಣಿಗೆ ಸಿಕ್ಕದೆ ನೆಲಕ್ಕೆ ಬೀಳುವಾಗಲು ದೈವಯತ್ನದಿಂದ ತರಗೆಲೆಯ ರಾಶಿಯ ಮೇಲೆ ಬಿದ್ದು ಅವನಿಳಿದು ಬರುವನಿತರಲ್ಲಿಯೆ ಕೆಲದಲ್ಲಿರುವೆಸ್ಸದಾಳಿಯು ಮರದ ಬೇರನು ಸೇರಿ ಇದ್ದು ಆ ಬೇಡನು ದೂರಕ್ಕೆ ಹೋದ ಮೇಲೆ ನಾನು ಬಹುತೃಷೆಯಿಂದ ನೀರನು ಬಯಸಿ ರೆಕ್ಕೆಗಳಿಲ್ಲದುದರಿಂದ ಅಡಿಗಡಿಗೆ ಮುಂದಕ್ಕೆ ಮುಗ್ಗುತ್ತ ಎಡಬಲಕ್ಕೆ ಬೀಳುತ್ತ ಡಗೆಯಿಂದ ಬಾಯಿಬಿಡುತ್ತ ಕೊಳದ ದಾರಿವಿಡಿದು ಬರುತ್ತಿರುವ ಸಮಯದಲ್ಲಿ ಆ ಸಮೀಪದಾಶ್ರಮದಲ್ಲಿ ಜಾಬಾಲಮುನೀಶ್ವರನ ಕುಮಾರನು ಹರಿತನೆಂಬವನು ತನ್ನ ಶಿಷ್ಯರು ಸ್ನೇಹಿತರು ಸಹಿತವಾಗಿ ಸ್ನಾನಕ್ಕೆ ಬರುತ್ತ ಆಗ ಅಲ್ಲಿರುವ ನನ್ನನ್ನು ಕಂಡು ದಯವಿಟ್ಟು ಕೊಳದ ತಡಿಗೆ ಕೊಂಡುಹೋಗಿ ನೀರ ಕುಡಿಯಿಸಿ ನೆಳಲಲ್ಲಿ ಇರಿಸಿ ಸ್ನಾನ ಮಾಧ್ಯಾಹ್ನಿಕಗಳನು ಮಾಡಿಕೊಂಡು ತಿರುಗಿ ಆಶ್ರಮಕ್ಕೆ ನನ್ನನು ತೆಗೆದುಕೊಂಡು ಹೋದಲ್ಲಿ, ಆಬಳಿಯ ಕೆಂಪಿನಸುಗೆಯ ಮರದ ನೆಳಲಲ್ಲಿ ಅನೇಕ ಋಷಿಗಳು ಸಹ ಕುಳಿತಿರುವ ಜಾಬಾಲಮುನಿಯು ನನ್ನನು ಕಂಡು— ಇದೇನು! ಎಂದು ಕೇಳಿದಲ್ಲಿ: ಸ್ನಾನಕ್ಕೆ ಹೋಗುವಾಗ ಈ ಗಿಣಿಯು ಮರದ ಮೇಲಿಂದ ಬಿದ್ದು ಹಾರಲಾರದೆ ತಂಗಿದ್ದು ಇ

ಲಾಗಿ ದಯದಿಂದ ನೀರ ಕುಡಿಯಿಸಿ ತಿರುಗಿ ಗೂಡಿನಲ್ಲಿ ಇರಿಸುವುಕ್ಕೆ ಮನಸು ಬಲು ಉದ್ವವಾದ ಕಾರಣ ರೆಕ್ಕೆಯು ಬರುವ ಪರಿಯಂತವು ನಮ್ಮ ಆಶ್ರಮದಲ್ಲಿ ಸಾಕಿಕೊಂಡಿದ್ದು ಬಿಟ್ಟುಬಿಟ್ಟರೆ ತನ್ನ ಮನಸ್ಸು ಬಂದ ಬಳಿಗೆ ಹೋದೀತು; ಪರಿಚರ್ಯದಿಂದ ಇಲ್ಲಿಯಾದರೂ ಇದ್ದೀತು; ಆವ ಬಗೆಯಲ್ಲಿಯಾದರೂ ವ್ಯರ್ಥವಾಗಿ ಸಾವ ಪ್ರಾಣಿಯನು ರಕ್ಷಿಸುವುದೆ ಧರ್ಮವೆಂದಿದ್ದೇನೆ - ಎಂದು ಹೇಳಲಾಗಿ; ಆ ಜಾಬಾಲಮುನಿಯು ನನ್ನನು ದಯಾದೃಷ್ಟಿಯಿಂದ ನೋಡಿ ಸರ್ವಜ್ಞನಾದ ಕಾರಣ ನನ್ನ ಪೂರ್ವಜನ್ಮದ ಕೃತಕೃತ್ಯವನ್ನು ತಿಳಿದು ಸಮೀಪದಲ್ಲಿದ್ದ ಋಷಿಗಳೊಡನೆ ಈ ಗಿಣಿಯು ತಾನು ಮಾಡಿದ ಪಾಪಫಲವನು ಅನುಭವಿಸುತ್ತಿದೆ, ಎಂದು ಹೇಳಲಾಗಿ; ಅದನ್ನು ಕೇಳಿ ಮುನಿಗಳು ಆಶ್ಚರ್ಯಪಟ್ಟು— ಸ್ವಾಮೀ! ಈ ಗಿಣಿಯು ಪೂರ್ವದಲ್ಲಿ ಯಾರು? ಆವ ದೇಶ? ಏನು ಪಾಪದಿಂದ ಗಿಣಿಯಾಗಿ ಹುಟ್ಟಿತು? ವಿಸ್ತಾರವಾಗಿ ಹೇಳಬೇಕು— ಎಂದು ಪ್ರಾರ್ಥಿಸಿ ಕೇಳಲಾಗಿ; ಇದು ದೊಡ್ಡ ಮಹಾಕಥೆ, ವಿಸ್ತಾರವಾಗಿ ಹೇಳಬೇಕು, ಈಗ ಮಾಧ್ಯಾಹ್ನಿಕ ಕಾಲವಾಗಿದೆ, ಭೋಜನಾನಂತರಕ್ಕೆ ಹೇಳಬಹುದು— ಎಂದು ಎಲ್ಲರನು ಕಳುಹಿಸಿ, ಸ್ನಾನ ಮಾಧ್ಯಾಹ್ನಿಕ ಜಪ ವೈಶ್ವದೇವ ದೇವತಾರ್ಚನೆ ಭೋಜನಾದಿಗಳಾದ ಮೇಲೆ ಸಾಯಂಕಾಲವಾದ ಮೇಲೆ ಸಾಯಂಕಾಲದ ಸಂಧ್ಯಾವಂದನೆ ಜಪಾಗ್ನಿಹೋತ್ರಗಳಾದ ಮೇಲೆ ಹರಿತಕುಮಾರನು ತನ್ನನು ತೆಗೆದುಕೊಂಡ ಮುನಿಗಳು ಸಹ ಜಾಬಾಲಮುನಿಯ ಹತ್ತಿರಕ್ಕೆ ಬಂದು— ಈ ಗಿಣಿಯು ಪೂರ್ವಜನ್ಮದ ವೃತ್ತಾಂತವನು ಕೇಳಬೇಕಾಗಿ ಮುನಿಗಳೆಲ್ಲರು ಕೇಳ ಬಂದಿದ್ದಾರೆ, ವಿಸ್ತಾರವಾಗಿ ಬುದ್ಧಿಗಲಿಸಬೇಕು— ಎಂದು ಕೇಳಲಾಗಿ ಜಾಬಾಲಮುನಿಯು ಹೇಳಿದುದು:—

ಅವಂತೀದೇಶದಲ್ಲಿ ಉಜ್ಜಯಿನಿಯೆಂಬ ಪಟ್ಟಣವುಂಟು. ಆ ಪಟ್ಟಣಕ್ಕೆ ತಾರಾಪೀಡನೆಂಬ ಅರಸು ಉಂಟು. ಶುಕನಾಸನೆಂಬ ಪ್ರಧಾನನಲ್ಲಿ ಸಕಲ ರಾಜ್ಯಭಾರವನು ನಿಲಿಸಿ ತಾನು ಸುಖದಲ್ಲಿ ಅಂತಃಪುರದ ಭೋಗಾಸಕ್ತನಾಗಿರುತ್ತ ಒಂದು ದಿನ ವಿಲಾಸವತಿಯೆಂಬ ಪಟ್ಟಸ್ತ್ರೀಯ ಮನೆಗೆ ಬಂದು ಅವಳು ಮಕ್ಕಳು ಇಲ್ಲದುದರಿಂದ ದುಃಖಿತೆಯಾಗಿರುವದನು ಕಂಡು ದೇವಪೂಜೆ ಬ್ರಾಹ್ಮಣಪೂಜೆ ದಾನ ಹೋಮ ತಪ ಉಪವಾಸಗಳನು ಮಾಡಿಸಿದಲ್ಲಿ ಮಕ್ಕಳಾದಾವು ಎಂದು ಚಿಂತೆಯ ಬಿಡಿಸಿ

ಅದೇ ರೀತಿಯಲ್ಲಿ ಪ್ರತಿದಿನವು ಪುತ್ರಕಾಮನೆಯಿಂದ ನಾನಾವಿಧವಾದ ಸತ್ಕರ್ಮವನು ನಡೆಸಿಕೊಂಡಿರುವಲ್ಲಿ ಒಂದು ದಿನ ಬೆಳಗುಜಾವದಲ್ಲಿ ಅರಸು ಒಂದು ಕನಸ ಕಂಡು ಆ ಕ್ಷಣದಲ್ಲಿಯೆ ಶುಕನಾಸನ ಕರೆಯಿಸಿ— ಈಗ ವಿಲಾಸವತಿಯು ಉಪ್ಪರಿಗೆಯ ಮೇಲೆ ಇರಲಾಗಿ ಚಂದ್ರಮಂಡಲವು ಇಳಿದುಬಂದು ವಿಲಾಸವತಿಯ ಮುಖವನು ಹೊಗುವಹಾಗೆ ಸ್ವಪ್ನದಲ್ಲಿ ಕಂಡೆನೆಂದು ಹೇಳಲಾಗಿ; ಶುಕನಾಸನು ಅತ್ಯಂತ ಸಂತೋಷಿತನಾಗಿ— ಶೀಘ್ರದಲ್ಲಿ ಗಂಡುಕುಮಾರನಾದಾನು- ಎಂದು ಹೇಳಿ, ನಾನು ಇಂದಿನ ರಾತ್ರಿಯಲ್ಲಿ ಸ್ವಪ್ನದಲ್ಲಿ ನನ್ನ ಸ್ತ್ರೀಯ ತೊಡೆಯ ಮೇಲೆ ಬೆಳ್ದಾವರೆಯ ಇರಿಸಿ ಇರುವುದನು ಕಂಡೆನೆಂದು ಹೇಳಲಾಗಿ; ಅರಸು ಅತ್ಯಂತ ಸಂತೋಷದಿಂದ ದೈವವು ಅನುಕೂಲವಾದರೆ ಶ್ರೀಯಸ್ಸಿನ ಮೇಲೆ ಶ್ರೀಯಸ್ಸು ಎಂದು ಇಷ್ಟಾಲಾಪಗಳನಾಡಿಕೊಳುತ ಶುಕನಾಸನ ಕೈಯ ಹಿಡಿದುಕೊಂಡು ಅಂತಃಪುರಕ್ಕೆ ಹೋಗಿ, ಈ ಸ್ವಪ್ನದ ವೃತ್ತಾಂತವನ್ನು ವಿಲಾಸವತಿಗೆ ಹೇಳಿ ಸಂತುಷ್ಟರಾಗಿದ್ದರು.

ಕೆಲವು ದಿವಸಗಳ ಮೇಲೆ ರಾತ್ರಿಯ ಹೊತ್ತಿನಲ್ಲಿ ಅರಸು ಒಳ ಓಲಗದಲ್ಲಿ ಸಮೀಪದಲ್ಲಿ ಕುಳಿತಿರುವ ಶುಕನಾಸನೊಡನೆ ಇಷ್ಟಾಲಾಪಗಳನಾಡಿಕೊಂಡಿರುವ ಸಮಯದಲ್ಲಿ ಅಂತಃಪುರದ ಬಾಗಿಲ ಊಳಿಗದ ಕುಲವರ್ಧನೆ ಎಂಬವಳು ಬಂದು ವಿಲಾಸವತಿಯು ಗರ್ಭವತಿಯಾಗಿದ್ದಾಳೆಂದು ಏಕಾಂತದಲ್ಲಿ ಹೇಳಲಾಗಿ; ಆ ಮಾತಿಗೆ ಅರಸಿನ ಮುಖ ವಿಕಸಿತವಾಗಿ ಶುಕನಾಸನ ಮುಖವ ನೋಡಲಾಗಿ; ಆ ಶುಕನಾಸನು ಇಷ್ಟು ಹರುಷಕ್ಕೆ ಕಾರಣವೇನು ಎಂದು ಯೋಚಿಸಿ ಮನಸ್ಸಿನಲ್ಲಿ ತಿಳಿದು ಅರಸನ ಸಮೀಪಕ್ಕೆ ಸೇರಿ— ಈ ರೀತಿಯುಹುದೆ ಎಂದು ಕೇಳಲಾಗಿ; ಅರಸು— ಕುಲವರ್ಧನೆ ಈ ರೀತಿ ಹೇಳುತ್ತಿದ್ದಾಳೆ. ನಾವು ಅಂತಃಪುರಕ್ಕೆ ಹೋಗಿ ಇದರ ನೆಲೆಯನು ಬೆಸಗೊಳ್ಳುವ ಎಂದು ಹೊರಟು ಅಲ್ಲಿ ಗರ್ಭವತಿಗಳಿಗೆ ಮಾಡತಕ್ಕ ಉಪಚಾರಗಳನು ಮಾಡಬಲ್ಲಂಥ ಆಪ್ತೆಯರು ವೃದ್ಧಸ್ತ್ರೀಯರು ಲೌಕಿಕಾಚಾರಗಳನ್ನು ನಡೆಸುತ್ತಿರುವ ಸಮಯದಲ್ಲಿ ಶುಕನಾಸ ಸಹ ವಿಲಾಸವತಿಯ ಮನೆಗೆ ಹೋಗಲಾಗಿ; ವಿಲಾಸವತಿಯು ಊಳಿಗದವಳ ಕೈಲಾಗಿನಲ್ಲಿ ಎದ್ದು ನಿಲ್ಲಲಾಗಿ ಬೇಡವೆಂದು ಒಂದೇ ಮಂಚದ ಮೇಲೆ ಕುಳಿತು ಮತ್ತೊಂದು ಅಪರಂಜಿಯ ಪೀಠದ ಮೇಲೆ ಶುಕನಾಸನು ಕುಳಿತುಕೊಂಡ ಮೇಲೆ,

ಅರಸು ವಿಲಾಸವತಿಯ ಮುಖವ ನೋಡೆ, ಶುಕನಾಸನು ಕೇಳುತ್ತಿದ್ದಾನೆ— ಕುಲವರ್ಧನೆ ಹೇಳಿದ ಮಾತು ನೆಲೆಯೆ? ಎಂದು ಕೇಳಿದಲ್ಲಿ ಅರಸಿತಿಯು ಒಂದಿಷ್ಟು ಮುಗುಳುನಗೆಗೂಡಿ ತಲೆವಾಗಿದಲ್ಲಿ, ಅರಸು- ನೀನು ಹೇಳದಿದ್ದರೂ ನಿನ್ನ ಮುಖವೂ ದೃಷ್ಟಿಯೂ ನಿನ್ನ ಶರೀರದಲ್ಲಿರುವ ಕುರುಹೂ ವ್ಯಕ್ತವಾಗಿ ಹೇಳುತ್ತಿವೆ ಎಂದು ಹೇಳಲಾಗಿ; ಮತ್ತು ಪರಿಹಾಸಕದ ನುಡಿಗಳನ್ನು ನುಡಿಯಲಾಗಿ; ಅರಸಿತಿಯು ಸಸಂಗೋಪದಿಂದ ಹುಬ್ಬು ಗಂಟಿಕ್ಕಿ ಒಂದಿಷ್ಟು ತಲೆವಾಗಿ ಅರಸನ ಓರೆನೋಟದಲ್ಲಿ ನೋಡಲಾಗಿ; ಶುಕನಾಸನು- ಅರಸಿತಿಯನು ಏನುಕಾರಣ ನಾಚಿಸಿ ಬಳಲಿಸುತಿದ್ದೀರಿ, ಬಹು ಹೊತ್ತಾಯಿತು ಎಂದು ಕಳುಹಿಸಿಕೊಂಡು ಮನೆಗೆ ಹೋದ ಮೇಲೆ; ಅರಸು ಆ ರಾತ್ರಿಯಲ್ಲಿ ವಿಲಾಸವತಿಯು ಅರಮನೆಯಲ್ಲಿಯೇ ಇದ್ದು ಆಮೇಲೆ ದಿನದಿನಕ್ಕೆ ಸಂತೋಷದಲ್ಲಿ ಇರುವಲ್ಲಿ; ನವಮಾಸ ತುಂಬಿ ಒಳ್ಳೆಯ ತಿಥಿಯಲ್ಲಿ ಒಳ್ಳೆಯ ನಕ್ಷತ್ರದಲ್ಲಿ ವಿಲಾಸವತಿಗೆ ಗಂಡುಗುಮರನಾಗಲಾಗಿ; ಆ ವಾರ್ತೆ ಹೇಳಿದವರಿಗೆ ಸರ್ವಾಭೀಷ್ಟವನ್ನು ಕೊಟ್ಟು ಜೋಯಿಸರು ಕಟ್ಟಿರುವ ಶುಭಮುಹೂರ್ತದಲ್ಲಿ ಶುಕನಾಸ ಸಹ ಸೂತಿಕದ ಮನೆಯ ಬಳಿಗೆ ಬಂದು ಮಗನ ಮುಖವ ನೋಡುತ್ತಿರುವಾಗ; ಶುಕನಾಸನು ಮಗನ ಸರ್ವಾವಯವವನ್ನು ಭಾವಿಸಿ ನೋಡಿ ಈ ಮಗುವಿನ ಶರೀರದಲ್ಲಿರುವ ರಾಜಚಿಹ್ನಗಳಂ ತೋರಿ ಬಣ್ಣಿಸುತ್ತಿರುವಲ್ಲಿ ಒಬ್ಬ ಊಳಿಗದವನು ಬಂದು ಅರಸಿಗೆ ಅಡ್ಡಬಿದ್ದು— ಸ್ವಾಮಿ! ಶುಕನಾಸಗೆ ಗಂಡುಕುಮಾರನಾದನು ಎಂದು ಹೇಳಿದಲ್ಲಿ; ಸಂತೋಷದಿಂದ ಅವನಿಗೆ ತಾ ತೊಟ್ಟ ಹೊದಿಕೆಯನು ಕೊಟ್ಟು, ಶುಕನಾಸನ ಮುಖವ ನೋಡಿ— ನಾವು ಅನ್ಯೋನ್ಯಮನುಷ್ಯಯತ್ನದಿಂದ ಸುಖದುಃಖಕ್ಕೆ ದ್ವಂದ್ವವಾಗಿ ಯೋಗಕ್ಷೇಮವಾಗಿ ನಡೆವುದು ಸರಿಯಷ್ಟೆ, ದೈವಯತ್ನದಿಂದ ಆಗುವ ಶ್ರೇಯಸ್ಸುಗಳು ಲೋಕದಲ್ಲಿಯೇ ಆಗುತ್ತವೆ ಎಂದು ಆಡಿಕೊಳ್ಳುತ್ತ, ಶುಕನಾಸ ಸಹ ಶುಕನಾಸನ ಮನೆಗೆ ಬಂದು ತನ್ನರಮನೆಗಿಂತಲೂ ಅತಿಶಯವಾಗಿ ಮಹೋತ್ಸವವನ್ನುಂಟು ಮಾಡಿಸಿ ತನ್ನ ಮನೆಗೆ ಬಂದು ಹತ್ತನೆಯ ದಿನದಲ್ಲಿ ಅನೇಕ ಸಂಭ್ರಮದಿಂದ ಕ್ಷತ್ರಿಯ ಜಾತಿಗೆ ತಕ್ಕ ನಾಮಕರಣವನ್ನು ಮಾಡಿಸಿ, ಚಂದ್ರಾಪೀಡನೆಂಬ ಹೆಸರನ್ನಿಟ್ಟು ಸಂತೋಷದಲ್ಲಿದ್ದನು. ಆ ಮರುದಿವಸ ಶುಕನಾಸನು ಅರಸಿನ ಅಪ್ಪಣೆವಡೆದು ತನ್ನ ಮಗ

ನಿಗೂ ಆ ಬ್ರಾಹ್ಮಣಜಾತಿಗೆ ಅನುಗುಣವಾದ ವೈಶಂಪಾಯನೆಂಬ ಹೆಸರನ್ನಿಟ್ಟನು.

ಅರಸು ಚಂದ್ರಾಪೀಡನಿಗೆ ಕಾಲಕಾಲದಲ್ಲಿ ಅನ್ನಪ್ರಾಶನ ಚೌಲ ಉಪನಯನ ಮೊದಲಾದ ವೇದೋಕ್ತ ಕರ್ಮಗಳನು ನಡೆಯಿಸಿ ದೊಡ್ಡವನಾದ ಮೇಲೆ ಊರಲ್ಲಿರುವ ಮಕ್ಕಳುಗಳೊಡನೆ ಮಕ್ಕಳಾಟಿಕೆಯ ಪರಾಕಿನಲ್ಲಿ ವಿದ್ಯಾಭ್ಯಾಸವು ಸಾಗದೆಂದು ಊರ ಹೊರಗೆ ಶಿಪ್ರೆಯೆಂಬ ನದಿಯ ತೀರದಲ್ಲಿ ಕೂಗುದಾರಿಯ ಅಗಲಕ್ಕೆ ಅಗಳಾಳುವೇರಿ ಸಹ ಕೋಟೆಯನು ಹಾಕಿಸಿ, ಅದಕ್ಕೆ ತಕ್ಕ ಕಾವಲು ಮಂದಿಯನ್ನು ಅಮರಿಸಿ ಅದರಲ್ಲಿ ಆನೆ ಕುದುರೆಗಳನು ಏರಿ ಆಡುವದಕ್ಕೆ ಬೇರೆ ಬೇರೆ ಸ್ಥಾನಗಳನು ಗರುಡಿಯನು ವಿದ್ಯಾಶಾಲೆಯನು ಏರ್ಪಾಡು ಮಾಡಿಸಿ, ಸಂಗಡ ಕಲಿಯುವದಕ್ಕೆ ಬುದ್ಧಿವಂತರಾಗಿರುವ ಬ್ರಾಹ್ಮಣರ ಮಕ್ಕಳನು ಅರಸುಗಳ ಮಕ್ಕಳನು ಕೂಡಿಸಿ, ವೈಶಂಪಾಯನಿಗೆ ಸಹ ಸುಮುಹೂರ್ತದಲ್ಲಿ ತನ್ನರಸುತನಕ್ಕೆ ಉಂಟಾದ ಸಂಭ್ರಮದಲ್ಲಿ ಸಮಸ್ತ ವಿದ್ಯಾಪ್ರಾರಂಭಗಳನು ಮಾಡಿಸಿ, ಮಗನನು ಆ ಉಪಾಧ್ಯಾಯರ ವಶಕ್ಕೆ ಕೊಟ್ಟು ಅಲ್ಲಿಂದ ಹೊರಕ್ಕೆ ಬಾರದಹಾಗೆ ಕಟ್ಟುಮಾಡಿಸಿ, ತಾನು ವಿಲಾಸವತಿ ಸಹ ದಿನಕ್ಕೆ ಒಂದು ವೇಳೆ ನೋಡುತ್ತಿರುವನು.

ಆ ಕುಮಾರರು ಮಕ್ಕಳಾಟಿಕೆಯ ಪರಾಕಿಲ್ಲದೆ ಇರುವುದರಿಂದಲೂ ಪ್ರತಿದಿನವೂ ಅರಸು ವಿಚಾರಿಸುವುದರಿಂದಲೂ ಉಪಾಧ್ಯಾಯರು ಪ್ರಯಾಸಪಟ್ಟು ಹೇಳುವುದರಿಂದಲೂ ಕುಶಲಬುದ್ಧಿಯಾದುದರಿಂದಲೂ ಶೀಘ್ರದಲ್ಲಿಯೆ ತರ್ಕ ವೇದಾಂತ ಶಬ್ದ ಮೀಮಾಂಸಗಳೆಂಬ ಶಾಸ್ತ್ರಗಳನು ಮನು ಮೊದಲಾದ ಧರ್ಮಶಾಸ್ತ್ರವನು ರಾಜನೀತಿಯನು ಅಭ್ಯಾಸ ಮಾಡಿ ಜಟ್ಟಿಸಾಧಕ ಬಿಲ್ಲುವಿದ್ಯೆ ಕತ್ತಿ ಕಠಾರಿ ಪೆಂಡೆಯನಿಟ್ಟು ತಿರುಗುಚಕ್ರ ಗಂಡುಕೊಡಲಿ ಮೊದಲಾದ ಸಾಧಕಗಳನು ಕಲಿತು, ಆನೆ ಕುದುರೆ ತೇರುಗಳ ಏರಾಟಗಳನು, ಕೊಳಲು ವೀಣೆ ಮದ್ದಲೆ ತಾಳ ಢಕ್ಕೆ ಮೊದಲಾದ ವಾದ್ಯಗಳನು, ಭರತ ಮೊದಲಾದ ನರ್ತನಶಾಸ್ತ್ರಗಳನು ನಾರದೀಯ ಮೊದಲಾದ ಸಂಗೀತಶಾಸ್ತ್ರಗಳನು, ಆನೆಯೊಂದಿಗೆ ಕಾದುವ ಹಾರುಗಟ್ಟಿಗೆವಿದ್ಯೆ, ಜಠಕವಿದ್ಯೆ, ಸಾಮುದ್ರಿಕೆಯ ಲಕ್ಷಣ, ಚಿತ್ರಾಟವಿದ್ಯೆ, ಸಿಪ್ಪರಿಗ ವಿದ್ಯೆ, ಪುಸ್ತಕದ ಲೇಖನವಿದ್ಯೆ, ರಾಯಸವಿದ್ಯೆ, ನಾನಾಬಗೆಯ

ಜೂಜು, ಸಂಗೀತ, ಪಲಬಗೆಯ ಶಕುನ, ಲೆಕ್ಕ, ರತ್ನಪರೀಕ್ಷೆ, ಶಿಲ್ಪಿ ವಿದ್ಯೆ, ವೈದ್ಯ, ಪರಂಗೀವಿದ್ಯೆ, ನಾಟಕ, ಇಂದ್ರಜಾಲ, ಕಥೆಗಳು, ಕಾವ್ಯ, ಮಹಾಭಾರತ, ಪುರಾಣ, ರಾಮಾಯಣ ಮೊದಲಾದ ನಾನಾ ವಿದ್ಯೆಗಳನು, ನಾನಾ ಲಿಪಿ, ನಾನಾ ಭಾಷೆ ನಾನಾ ಸಂಜ್ಞೆಗಳನು ಅರಿತು, ಆ ಗುರುಗಳಿಗೆ ಮನಸ್ಸಂತೋಷ ಮಾಡಿದರು.

ಆಮೇಲೆ ಯೌವನ ಪ್ರಾದುರ್ಭಾವವಾಗಲು ಚಂದ್ರಾಪೀಡನ ಊರಿಗೆ ಕರತರಬೇಕೆಂದು ಪಟ್ಟಣವೆಲ್ಲವನು ತೋರಣಮೇಲುಕಟ್ಟುಗಳಿಂದಲಂಕ ರಿಸಿ, ಚತುರಂಗಬಲಸಹಿತವಾಗಿ ಬಲಾಹಕನೆಂಬ ದಳವಾಯನ ಕಳು ಹಿಸಿ, ಕರತರಹೇಳಲಾಗಿ; ಅವನು ವಿದ್ಯಾಗೃಹಕ್ಕೆ ಹೋಗಿ ಚಂದ್ರಾ ಪೀಡನೆಂಬ ಕುಮಾರನಿಗೆ ಕೈಮುಗಿದು— ನಿಮ್ಮನು ಪಟ್ಟಣಕ್ಕೆ ಬರ ಹೇಳಿ ಅರಸು ಕಟ್ಟು ಮಾಡಿಸಿದ್ದಾರೆ. ನೀವು ನಿಮಗೆ ಆರನೆಯ ವರು ಷದಲ್ಲಿ ಇಲ್ಲಿಗೆ ವಿದ್ಯಾಭ್ಯಾಸಕ್ಕೆ ಬಂದಿರಿ. ಈಚೆಗೆ ಹತ್ತು ವರುಷವಾ ಯಿತು. ಈಗ ಸಕಲವಾದ ಪುರಜನರೆಲ್ಲರು ನಿಮ್ಮ ಕಾಣಬೇಕೆಂಬ ಸಂತೋಷದಿಂದಿದ್ದಾರೆ. ಬರಬೇಕೆಂದು ಹೇಳಲಾಗಿ; ಅರಸು ಕಳುಹಿಸಿ ಕೊಟ್ಟಿರುವ ಸಮುದ್ರದ್ವೀಪದಲ್ಲಿ ಹುಟ್ಟಿದ ಅವಲಕ್ಕಿವರ್ಣದ ಇಂದ್ರಾಯು ಧವೆಂಬ ಕುದುರೆಯನು ಏರಿಕೊಂಡು ವೈಶಂಪಾಯನ ಕೂಡ ಬಂದು, ಅರಮನೆಯಲ್ಲಿ ಅರಸ ಕಾಣಿಸಿಕೊಂಡಲ್ಲಿ ಅರಸು ಸಕಲ ಬಹುಮಾನ ಗಳನು ಮಾಡಿ, ಅಂತಃಪುರಕ್ಕೆ ವೈಶಂಪಾಯನು ಸಹ ವಿಲಾಸವತಿಯ ಕಾಣಿಸಿಕೊಂಡು, ಕ್ಷಣಮಾತ್ರ ಇಷ್ಟಾಲಾಪಗಳನಾಡುತ್ತಿದ್ದು, ಅಲ್ಲಿಂದ ಕಳುಹಿಸಿಕೊಂಡು ಶುಕನಾಸನನ್ನು ಕಂಡು, ಆ ಶುಕನಾಸನ ಮನೆಯ ಅಂತಃಪುರದ ಶುಕನಾಸಸ್ತ್ರೀಮನೋರಮೆ ಎಂಬುವಳನು ಕಾಣಿಸಿಕೊಂಡು ಆಮೇಲೆ ತನಗೆಂದು ಪ್ರತ್ಯೇಕವಾಗಿ ಕಟ್ಟಿಸಿದ್ದ ಅರಮನೆಗೆ ಬಂದು, ಅಲ್ಲಿ ತನ್ನ ಮಲಗುವ ಮನೆಯ ಸಮೀಪದಲ್ಲಿ ಬಂದು ಮನೆಯಲ್ಲಿ ಇಂದ್ರಾಯುಧವನ್ನು ಕಟ್ಟಿಸಿ, ಅಲ್ಲಿ ಕೆಲವು ದಿನ ಸುಖದಲ್ಲಿ ಇರುತ್ತಿದ್ದು ಒಂದು ದಿನ ದೊಡ್ಡ ಅರಮನೆಯಲ್ಲಿ ಇರುವ ಕೈಲಾಸನೆಂಬ ಅಣ್ಣ ಗಳು ಸರ್ವಾಭರಣಭೂಷಿತಳಾಗಿ ಇರುವ ಒಂದು ಹೆಣ್ಣನು ಕರೆದುಕೊಂಡು ಬಂದು ಚಂದ್ರಾಪೀಡನ ಬಳಿಯಲ್ಲಿ ನಿಂದು ಕೈಮುಗಿದು— ಅಮ್ಮನವರು ಬುದ್ಧಿಗಲಿಸಿ ಕಳುಹಿಸಿದ್ದಾರೆ. ಈ ಹೆಣ್ಣು ಕುಲೂತರಾಯನ ಮಗಳು; ಕುಲೂತರಾಯನ ಪಟ್ಟಣವ ಸೂರೆಗೊಳುವಾಗ ಸಿಕ್ಕಿದಳು; ಅರಸಿನವರ

ಅಪ್ಪಣೆಯ ಮೇರೆ ನನ್ನ ವಶಕ್ಕೆ ತೆಗೆದುಕೊಂಡೆನು; ಪತ್ರಲೇಖೆಯೆಂಬ ಹೆಸರಿಟ್ಟು ವಿದ್ಯಾಬುದ್ಧಿಗಳ ಕಲಿಸಿ ಬಹು ಸ್ನೇಹದಿಂದ ಸಾಕಿಕೊಂಡಿದ್ದೆವು; ಇವಳನು ಊಳಿಗಕೆ ಇರಿಸಿಕೊಂಡು ಬರಬೇಕು—ಎಂದು ಅಮ್ಮನವರು ಹೇಳಿದರು, ಎಂದು ಹೇಳಿ, ಆ ಹೆಣ್ಣನು ಒಪ್ಪಿಸಿ ಹೋದಲ್ಲಿ ಚಂದ್ರಾಪೀಡನು ರಾಯ ಹೇಳಿ ಕಳುಹಿಸಿದ್ದ ಮಾತಿನಲ್ಲಿ ವಿಶ್ವಾಸದಿಂದಲೂ ಆ ಪತ್ರಲೇಖೆಯ ಗುಣಾತಿಶಯದಿಂದಲೂ ಅವಳಿಗೂ ಇವನಲ್ಲಿ ಸ್ನೇಹ ಬೆಳವಳಿಕೆಯಾಗಿ ಕುಳ್ಳಿರುವಲ್ಲಿ ನಿಂತಿರುವಲ್ಲಿ ಹೊರಕ್ಕೆ ಹೊರಡುವಲ್ಲಿಯೂ ಸಮೀಪದಲ್ಲಿಯೆ ಕಾದುಕೊಂಡು ಊಳಿಗವ ಮಾಡಿಕೊಂಡಿದ್ದಳು.

---

# ಕನ್ನಡ ಸಾಹಿತ್ಯ

ಕನ್ನಡ ಸಾಹಿತ್ಯವು ಬಹು ಪುರಾತನವಾದುದು, ವಿಸ್ತಾರವಾದುದು. ಒಂಬತ್ತನೆಯ ಶತಮಾನಕ್ಕೆ ಪೂರ್ವದಲ್ಲಿಯೇ ಕನ್ನಡದಲ್ಲಿ ನುರಿತ ಗದ್ಯ ಗ್ರಂಥಕರ್ತೃಗಳೂ ಪದ್ಯಗ್ರಂಥಕರ್ತೃಗಳೂ ಇದ್ದರೆಂದು ತಿಳಿಯಬರುವುದು. ಕನ್ನಡನಾಡು ಒಂಬತ್ತನೆಯ ಶತಮಾನದ ಆದಿಯಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿತ್ತು. ಈ ದಕ್ಷಿಣೋತ್ತರದ ಮೇರೆಗಳ ಮಧ್ಯದಲ್ಲಿರುವ ಪಟ್ಟದಕಲ್ಲು, ಕೊಪ್ಪಳ, ಪುಲಿಗೆರೆ, ಒಕ್ಕುಂದ ಈ ಚೌಗಡಿಗಳ ನಡುವಣ ನಾಡೇ ಆ ಕಾಲಕ್ಕೆ ಕನ್ನಡ ತಿರುಳಾಗಿತ್ತು. ಇದರಿಂದ ಆ ಕಾಲದಲ್ಲಿ ಕನ್ನಡನಾಡಿಗಿದ್ದ ಪೂರ್ವ ಪಶ್ಚಿಮದ ಮೇರೆಗಳನ್ನು ಊಹಿಸಿ ತಿಳಿಯುಬಹುದಾಗಿದೆ. ಕನ್ನಡನಾಡಿನ ಈ ವಿಸ್ತಾರಕ್ಕೆ ೧೨ ನೆಯ ಶತಮಾನದ ಆದಿಯ ವರೆಗೂ ಚ್ಯುತಿಯುಂಟಾಗಿರಲಿಲ್ಲವೆಂದು ಪಶ್ಚಿಮ ಚಾಳುಕ್ಯರ ಶಾಸನಗಳಿಂದಲೂ ಹೊಯ್ಸಳ ವಿಷ್ಣುವರ್ಧನನ ಶಾಸನಗಳಿಂದಲೂ ಮನಗಾಣಬಹುದು. ಆ ಬಳಿಕ ಉತ್ತರದ ಮೇರೆಯು ಗೋದಾವರಿಯಿಂದ ಕೃಷ್ಣಾನದಿಯ ವರೆಗೆ ಸರಿದು ಇತರ ಭಾಷೆಗಳ ಆಕ್ರಮಣಕ್ಕೆ ಗುರಿಯಾದಂತೆ ತಿಳಿಯಬರುವುದು. ಕಲಬುರ್ಗಿ ಜಿಲ್ಹೆಯಲ್ಲಿರುವ ಮಾನ್ಯಖೇಟ ರಾಜಧಾನಿಯಲ್ಲಿ ಆಳುತಿದ್ದ ರಾಷ್ಟ್ರಕೂಟರಾಜನಾದ ನೃಪತುಂಗನ ಕಾಲದಲ್ಲಿ "ಕವಿರಾಜಮಾರ್ಗ"ವೆಂಬ ಲಕ್ಷಣ ಗ್ರಂಥವು ಹುಟ್ಟಿದೆ. ಆ ಗ್ರಂಥದಲ್ಲಿ ಕನ್ನಡ ಜನರು ನುಡಿಯಲ್ಲಿ ಜಾಣರೆಂದೂ, ಸಾಮಾನ್ಯರು ಕೂಡ ಕುರಿತೋದದೆಯೇ ಕಾವ್ಯಪ್ರಯೋಗ ಪರಿಣತಮತಿಗಳಾಗಿದ್ದರೆಂದೂ ಹೇಳಿದೆ. ಆ ಕಾಲದಲ್ಲಿ ಕನ್ನಡವು ಸಂಸ್ಕೃತ ಪ್ರಾಕೃತಗಳ ಪ್ರಭಾವಕ್ಕೆ ಒಳಗಾಗಿತ್ತೆಂದೂ ಅದೇ ಗ್ರಂಥದಿಂದ ಗೊತ್ತಾಗುವುದು. ಆದರೆ ಇದರಿಂದ ಕನ್ನಡ ಸಂಸ್ಕೃತಿಗೂ ಕನ್ನಡದ ವೈಶಿಷ್ಟ್ಯಕ್ಕೂ ಇಂದಿನ ವರೆಗೆ ಕುಂದುಂಟಾದಂತೆ ತೋರುವುದಿಲ್ಲ. ಯಾವುದರಿಂದ ಕನ್ನಡಕ್ಕೆ ಮಹಿಮೆಯುಂಟಾಗಿದೆಯೋ ಯಾವುದಕ್ಕೆ ಕನ್ನಡ ಸಂಸ್ಕೃತಿ ಆತ್ಮಸ್ವರೂಪವೂ, ಕನ್ನಡದ ವೈಶಿಷ್ಟ್ಯವು ಅಲಂಕಾರಪ್ರಾಯವೂ ಆಗಿದೆಯೋ ಅಂತಹ ಕನ್ನಡ ಸಾಹಿತ್ಯದ ಸಾರವನ್ನು ಸವಿವುದು ಪ್ರತಿಯೊಬ್ಬ ಕನ್ನಡಿಗನ ಕನ್ನಡದ ಅಭಿಮಾನಿಯ ಆದ್ಯ ಕರ್ತವ್ಯವಾಗಿದೆ.

## ಕನ್ನಡ ಸಾಹಿತ್ಯದ ಕೆಲವು ವೈಲಕ್ಷಣ್ಯಗಳು.

ಸೃಷ್ಟಿಸೌಲಭ್ಯ:— ಸಾಹಿತ್ಯವು ಜನರ ಮನೋಧರ್ಮಕ್ಕೆ ತಕ್ಕಂತಿರುವುದು. ಜನರ ಮನೋಧರ್ಮವು ನಾಡಿನ ಭೂರಚನೆ, ವಾಯುಗುಣ, ಸೃಷ್ಟಿಸಂಪತ್ತುಗಳಿಗೆ ತಕ್ಕಂತೆ ರೂಪುಗೊಳ್ಳುವುದು. ಕನ್ನಡನಾಡಿನ ಬಹುಭಾಗವು ಬರಿಯ ಬಯಲಲ್ಲಿರದೆ ಎತ್ತರವಾದ ಪ್ರದೇಶದಲ್ಲಿದ್ದು ಎಲ್ಲೆಡೆ ಹವಣಾಗಿ ಹಂಚಿದ ಬೆಟ್ಟದ ಸಾಲುಗಳಿಂದಲೂ ಗುಡ್ಡಗಾಡುಗಳಿಂದಲೂ ಹೊಳೆಹಳ್ಳಿಗಳಿಂದಲೂ, ಕೆರೆಕಾಲುವೆಗಳಿಂದಲೂ ಕೂಡಿ ತೃಣಕಾಷ್ಠಜಲ ಸಮೃದ್ಧಿಯಿಂದ ಶೋಭಾಯಮಾನವಾಗಿದೆ; ಜನಪದದ ಸಾಹಸಜೀವನಕ್ಕೆ ಸಹಕಾರಿಯಾಗಿದೆ. ಕಲ್ಪನಾಶಕ್ತಿಗೆ ಕುರುಹಾಗಿದೆ. ಹೃದಯವೈಶಾಲ್ಯಕ್ಕೆ ತವರುಮನೆಯಾಗಿದೆ; ಬುದ್ಧಿವಿಕಾಸಕ್ಕೆ ಬಲಕೊಟ್ಟಿದೆ; ಭಕ್ತಿಶ್ರದ್ಧೆಗಳಿಗೆ ಬೆಂಬಲವಾಗಿದೆ; ಹೆಚ್ಚೇನು?— ಪ್ರಶಾಂತಜೀವನಕ್ಕೆ ಕೂಡ ನೆಲೆವೀಡಾಗಿದೆ. ಇಂತಹ ಉತ್ತಮ ಸನ್ನಿವೇಶದಲ್ಲಿ ಕನ್ನಡ ಸಾಹಿತ್ಯವು ಹುಟ್ಟಿ ಉತ್ತಮವಾಗಿ ಬೆಳೆದುಬಂದಿದೆ. ಅದರಿಂದಲೇ ಈ ಸಾಹಿತ್ಯವೆಂಬ ಕನ್ನಡಿಯಲ್ಲಿ ಪೂರ್ವಾಚಾರ್ಯರೂ ಕವಿಪುಂಗವರೂ ತಾವು ತಾವು ಕಂಡರಿತ ಸತ್ಯಜ್ಞಾನಾನಂತಸ್ವರೂಪನಾದ ಪರಮಾತ್ಮನನ್ನು ತೋರಿಸಿಕೊಡಲು ಶಕ್ತರಾದರು; ಸೃಷ್ಟಿಯಲ್ಲಿ ಅಡಗಿರುವ ಸೌಂದರ್ಯಾನಂದಗಳ ರಸಪ್ರವಾಹವನ್ನು ಹೊರಹೊಮ್ಮಿಸಲು ಶಕ್ತರಾದರು; ಮಾನವ ಜೀವನದ ಸುಖದುಃಖಗಳನ್ನೂ ಆಶೋತ್ತರಗಳನ್ನೂ ತೂಗಿ ತೇಲಿಸಲು ಸಮರ್ಥರಾದರು; ಅಷ್ಟೇ ಅಲ್ಲ, ಶಾಸ್ತ್ರಕಲೆಗಳ ಸಾರಸರ್ವಸ್ವವನ್ನು ಕೂಡ ಅದರಲ್ಲಿಯೇ ಕೇಂದ್ರೀಕರಿಸಲು ದಕ್ಷರಾದರು.

ಸಂಸ್ಕೃತಿರಸಾಯನ:— ಭೌಗೋಲಿಕ ದೃಷ್ಟಿಯಿಂದಾದರೂ ಕನ್ನಡ ನಾಡು ನೆಲಸಿರುವ ಪ್ರದೇಶವು ಅನುಕೂಲ ಪರಿಸ್ಥಿತಿಯಲ್ಲಿದೆ. ತನ್ನ ತೆಂಕಲಲ್ಲಿ ಅಚ್ಚಳಿಯದೆ ನಿಂತಿರುವ ದ್ರಾವಿಡ ಸಂಸ್ಕೃತಿಯನ್ನು ಬಿಡದೆ, ಬಡಗಲಿಂದ ಬಂದ ಆರ್ಯಸಂಸ್ಕೃತಿಯ ಸಾರವನ್ನು ಹೀರಿ, ತನ್ನದೇ ಆದ ಸಂಸ್ಕೃತಿವಿಶೇಷದ ಘನತೆಯನ್ನು ಹೆಚ್ಚಿಸಿಕೊಂಡಿದೆ. ಕ್ರಿ. ಶ. ೯—೧೦ನೆಯ ಶತಮಾನಗಳಲ್ಲಿ ಹುಟ್ಟಿದ ಗ್ರಂಥಗಳಿಂದ ಆರಂಭವಾಡಿ ಜೈನಕವಿಗಳೂ ಬ್ರಾಹ್ಮಣಕವಿಗಳೂ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ತಮ್ಮ ತಮ್ಮ ಸಂಸ್ಕೃತಿಯ ಫಲವನ್ನು ತಮ್ಮ ಉದ್ದಾಮ ಕಾವ್ಯಗಳ ಮುಖದಿಂದ ಬೀರಿದರು. ೧೨ನೆಯ ಶತಮಾನದಲ್ಲಿ ಶಿವಶರಣರು ತಮ್ಮ ಮೃದುಮಧುರವಾದ

"ವಚನ" ರೂಪದಲ್ಲಿ ಕರ್ಣಾಟಕೋಪನಿಷತ್ಸಾರವನ್ನು ಬೀರಿದರು. ೧೬ನೆಯ ಶತಮಾನದಲ್ಲಿ ವೈಷ್ಣವದಾಸರು ತಮ್ಮ ಕೀರ್ತನೆಗಳೆಂಬ ಗಾನರಸಾಮೃತವಲ್ಲಿ ಬೆರಸಿ ಹಂಚಿದರು. ೧೭ ನೆಯ ಶತಮಾನದಲ್ಲಿ ಶ್ರೀ ವೈಷ್ಣವ ಕವಿಗಳು ದ್ರವಿಡೋಪನಿಷತ್ಸಾರವೆನಿಸಿದ "ತಿರುವಾಯ್ಮೊಳಿ" ಯೆಂಬ ದಿವ್ಯ ಪ್ರಬಂಧವನ್ನೂ ದ್ರಾವಿಡ ಸಂಪ್ರದಾಯ ವಿಶೇಷಗಳನ್ನೂ ಕನ್ನಡ ಸಾಹಿತ್ಯದ್ವಾರದಿಂದ ಪರಿಚಯ ಮಾಡಿಸಿಕೊಟ್ಟರು. ೧೯—೨೦ ನೆಯ ಶತಮಾನಗಳಲ್ಲಿ ಕನ್ನಡಸಾಹಿತ್ಯಕ್ಕೆ ಅನ್ಯಸಾಹಿತ್ಯಗಳ ಭಿನ್ನಸಂಸ್ಕೃತಿಗಳ ಸಮಾವೇಶವು ಕ್ರಮಕ್ರಮವಾಗಿ ಉಂಟಾಗುತ್ತಿರುವುದು.

ಗದ್ಯ ಗೌರವಃ— ಹೀಗೆ ಬೆಳೆದುಬರುತ್ತಿರುವ ಸಾಹಿತ್ಯವು ಆದಿಯಲ್ಲಿ ಎಂದರೆ ಕ್ರಿ. ಶ. ೬ ರಿಂದ ೧೭ ನೆಯ ಶತಮಾನದ ವರೆಗೆ ಶಿಲಾಶಾಸನಗಳಲ್ಲಿಯೂ ತಾಮ್ರಪಟಗಳಲ್ಲಿಯೂ ತಾಳಪತ್ರಗಳಲ್ಲಿಯೂ ಪ್ರಕಾಶಗೊಂಡಿತು. ೧೮ ನೆಯ ಶತಮಾನದಲ್ಲಿ ಕಾಗದಗಳಲ್ಲಿಯೂ ಕಲ್ಲಚ್ಚುಗಳಲ್ಲಿಯೂ ಬೆಳಕಿಗೆ ಬಂದಿದೆ. ೧೯—೨೦ ನೆಯ ಶತಮಾನಗಳಲ್ಲಿ ಮುದ್ರಣ ಯಂತ್ರಗಳ ಸಹಾಯದಿಂದ ಎಲ್ಲೆಲ್ಲಿಯೂ ಹರಡುತ್ತಿರುವುದು. ಕ್ರಿ. ಶ. ೬ ರಿಂದ ೮ ನೆಯ ಶತಮಾನಗಳೊಳಗೆ ಬರೆದ ಕಾವ್ಯವಾವುದೂ ಇನ್ನುವರೆಗೂ ದೊರೆತಿಲ್ಲ; ಆ ಕಾಲದ ಸಾಹಿತ್ಯವು ನಮಗೆ ದೊರೆದುದು ವಿಶೇಷವಾಗಿ ಶಾಸನಸಾಹಿತ್ಯವೇ. ಈ ಪ್ರಾಚೀನ ಶಾಸನಗಳ ಭಾಷೆ ಹಳಗನ್ನಡಕ್ಕಿಂತಲೂ ಹಳೆಯದಾಗಿದೆ. ವಿಷಯ ವಿಚಾರದಲ್ಲಿ ಕನ್ನಡನಾಡಿನ ನಾನಾ ಭಾಗಗಳ ಸ್ಥಳವರ್ಣನೆ, ರಾಜಾನ್ವಯಗಳು, ಸಾಮಾಜಿಕ ಪರಿಸ್ಥಿತಿ ಇವೇ ಮುಖ್ಯವಾಗಿವೆ; ಈ ಸಾಮಾಜಿಕ ಪರಿಸ್ಥಿತಿ ವರ್ಣನೆಯಲ್ಲಿ ಕನ್ನಡ ಜನರ ಕಲಾಪ್ರಿಯತೆ, ಧರ್ಮನಿಷ್ಠೆ, ದೈವಭಕ್ತಿ, ಸ್ವಾಮಿಭಕ್ತಿ, ದೇಶಾಭಿಮಾನ, ತ್ಯಾಗಬುದ್ಧಿ, ಸರ್ವಸಂಗಪರಿತ್ಯಾಗ, ಸತೀಮಣಿಯರ ಉತ್ಕಟ ಪಾತಿವ್ರತ್ಯವೇ ಮುಂತಾದ ಸದ್ಗುಣ ವಿಚಾರಗಳನ್ನು ಕಾಣಬಹುದು. ಈ ಪ್ರಾಚೀನ ಶಾಸನಗಳೆಲ್ಲ ಸಾಮಾನ್ಯವಾಗಿ ಗದ್ಯದಲ್ಲಿಯೇ ಇವೆ; ಅಲ್ಲಲ್ಲಿ ಕನ್ನಡ ಛಂದಸ್ಸಿನ ಪದ್ಯಗಳೂ ಇತರ ಜಾತಿಯ ವೃತ್ತಗಳೂ ಕಂಡುಬರುವವು. ೯ ನೆಯ ಶತಮಾನದಿಂದ ಈಚೆಗೆ ದೊರೆತಿರುವ ಗ್ರಂಥಗಳಲ್ಲಿ ಗದ್ಯಕಾವ್ಯಗಳೂ, ಗದ್ಯಪದ್ಯಮಿಶ್ರವಾದ ಚಂಪೂಕಾವ್ಯಗಳೂ, ಕನ್ನಡಛಂದಸ್ಸಿನಲ್ಲಿ ಬರೆದ ಕಾವ್ಯಗಳೂ, ಪದ (ಕೀರ್ತನೆ) ಗಳೂ ಅಥವಾ ಹಾಡುಗಳೂ ಯಕ್ಷಗಾನ ಪ್ರಬಂಧಗಳೂ ಕೂಡಿವೆ. ಮಥಿತಾರ್ಥವೇನೆಂದರೆ ಕನ್ನಡದಲ್ಲಿ ಗದ್ಯಕ್ಕೂ ವಿಶೇಷ

ಪ್ರಾಶಸ್ತ್ಯವುಂಟು; ಕನ್ನಡದಲ್ಲಿ ಬಳಸಿದ ಸಂಸ್ಕೃತಜಾತಿಯ ಛಂದಸ್ಸಿನ ಸಮುತೂಕಕ್ಕೇ ಗದ್ಯವನ್ನೂ ಅಳವಡಿಸಿದೆ; ಚಂಪೂಕಾವ್ಯಗಳೂ, ಗದ್ಯಕಾವ್ಯಗಳೂ, "ವಚನ" ಗಳೂ ಇದಕ್ಕೆ ನಿದರ್ಶನ. ಕನ್ನಡವಾತು ಸ್ವಭಾವದಿಂದಲೇ ಮೃದುವಾಗಿ ತನ್ನ ಸಹಜ ಪದ ಮೈತ್ರಿಯಿಂದ ಗೆಜ್ಜೆಯನ್ನು ಪೋಣಿಸಿದಂತೆ ಮಂಜುಳ ನಾದವನ್ನು ಕೊಡತಕ್ಕ ಗುಣದಿಂದ ಕೂಡಿದೆ. ಆದರಿಂದಲೇ ಕನ್ನಡ ಛಂದಸ್ಸು ಸಂಸ್ಕೃತ ಛಂದಸ್ಸಿನಂತೆ ಸ್ವರಬದ್ಧವಾಗದೆ, ತಾಳಬದ್ಧವಾಗಿ ನಿಸರ್ಗಖಂಡಪ್ರಾಸಕ್ಕೆ ಒಗ್ಗಿದೆ. ಕನ್ನಡಸಾಹಿತ್ಯದಲ್ಲಿ ವಿಶಿಷ್ಟ ಪ್ರಭೇದವೆನಿಸುವ "ವಚನ" ಲಹರಿಯನ್ನೂ, "ಪದ" ಮಾಲೆಯನ್ನೂ, "ಕೀರ್ತನ" ತರಂಗವನ್ನೂ ನೋಡಿದರೆ ಅವೇನು ಪದ್ಯಾತ್ಮಕವಾದ ಗದ್ಯವೋ ಗದ್ಯಾತ್ಮಕವಾದ ಪದ್ಯವೋ ಎಂಬ ಭ್ರಾಂತಿಯನ್ನು ಹುಟ್ಟಿಸುವುವು. ಉದಾಹರಣೆಗಾಗಿ ಶಿವಶರಣರ "ವಚನ" ಗಳನ್ನು ಸಮಯೋಚಿತವಾಗಿ ದ್ವಿಪದಿ-ತ್ರಿಪದಿ-ಚೌಪದಿಗಳ ತಾಳಕ್ಕೆ ಎಳೆಯುಬಹುದು. ಶುದ್ಧ ಕನ್ನಡದಲ್ಲಿ ಛಂದೋರಚನೆಯಾದರೂ ತೊಡಕಿಲ್ಲದೆ ಬಹು ಸುಲಭವಾಗಿದೆ; ತಾಳವೆಂಬ ಬಳ್ಳಿಯಲ್ಲಿ ಕನ್ನಡನುಡಿಯು ದ್ವಿಪದಿ-ತ್ರಿಪದಿ-ಚೌಪದಿ-ಷಟ್ಪದಿ ಬಹುಪದಿ (ರಗಳೆ) ಗಳೆಂಬ ಎಸಳುಗಳಿಂದ ಕೂಡಿದ ಐದು ಸುತ್ತಿನ ಮಲ್ಲಿಗೆಯ ಹೂವರಳಿ ಮಗಮಗಿಸುತ್ತಿರುವುದು.

ಪರಮಾರ್ಥಸಾಧನೆ:— ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಶಬ್ದಾರ್ಥಗಳ ತತ್ಪರತೆಯನ್ನು ಹೆಜ್ಜೆ ಹೆಜ್ಜೆಗೂ ವ್ಯಕ್ತಪಡಿಸಿರುವರು; ಅವರಲ್ಲಿ ಪಂಪ-ರನ್ನರಂತೆ "ನಿಸರ್ಗಪ್ರತಿಭೆ" ಯಿಂದ ಬರೆದವರಿದ್ದಾರೆ; ರುದ್ರಭಟ್ಟನಂತೆ "ಕಾವ್ಯಸಮಾಧಿ" ಯಲ್ಲಿ ಕುಳಿತು "ಋಷಿ" ಯಾಗಿ ಬರೆದವರಿದ್ದಾರೆ; ಹರಿಹರನಂತೆ ಕಾವ್ಯವು "ಕಲ್ಪಾಂತರ ಸ್ಥಾಯಿ"ಯಾಗಬೇಕೆಂದು "ಶಬ್ದದರಿದ್ರ" ರಾಗದೆ ಬರೆದವರಿದ್ದಾರೆ; ಮಧುರ ಕವಿಯಂತೆ ಕೇಳಿದವರ "ಎದೆ ಜಿಕ್ಕನೆ ಬಿರಿವಂತೆ" ಬರೆದವರಿದ್ದಾರೆ; ಲಕ್ಷ್ಮೀಶನಂತೆ ಪಂಡಿತಪಾಮರರಿಬ್ಬರಿಗೂ ರಂಜನೆಯಾಗುವಂತೆ ಬರೆದವರಿದ್ದಾರೆ; ಆತ್ಮಾನಂದವನ್ನು ಹೊರಸೂಸುವ ಶಕ್ತಿಯಿಟ್ಟು ಬರೆದವರಿದ್ದಾರೆ; ಹೆಚ್ಚೇಕೆ?— ಪುರುಷಾರ್ಥಗಳನ್ನೇ ಗಳಿಸಿಕೊಡುವಷ್ಟು ಯೋಗ್ಯತೆ ತಮ್ಮ ಕಾವ್ಯಗಳಿಗಿರಬೇಕೆಂಬ ಪರಮೋದ್ದೇಶದಿಂದ ಬರೆದವರೂ ಇದ್ದಾರೆ. ಕನ್ನಡ ಕವಿಗಳಲ್ಲಿ ಮತ್ತೊಂದು ಗುಣವಿಶೇಷವುಂಟು.— ಏನೆಂದರೆ, ಪಾಶ್ಚಾತ್ಯ ಸಾಹಿತ್ಯಕಾರರ ಸೃಷ್ಟಿಯಲ್ಲಿರುವಂತೆ ಕಾವ್ಯವೆಂದರೆ ಬರಿಯ "ಕಾವ್ಯ" ಪ್ರೇಮ

ದಲ್ಲಿಯೇ ಗುರಿಯಿಡದೆ, ಕನ್ನಡ ಕವಿಗಳು "ಲೋಕಾಗಮ ಸಕಲ ಕಲಾ ಕೋವಿದ" ರಾಗಿ "ಶಾಸ್ತ್ರನಿಷ್ಣಾತ" ರಾಗಿ ಅವುಗಳ ಜೀವಕಳೆಯನ್ನು ಕೂಡ ಕಾವ್ಯದೇವಿಯಲ್ಲಿ ತುಂಬಿ ಕಾವ್ಯದ ಸೊಬಗನ್ನೂ ಉದ್ದೇಶವನ್ನೂ ಪ್ರಯೋಜನವನ್ನೂ ಪರಿಪೂರ್ಣ ಮಾಡಿರುವರು. ಹೀಗೆ "ಕಾವ್ಯಧರ್ಮ" ದಲ್ಲಿ "ಪ್ರಪಂಚಧರ್ಮ" ವನ್ನೂ ಔಚಿತ್ಯಕ್ಕೆ ತಕ್ಕಂತೆ ಬೆರಸಿ ಪರಮಾರ್ಥವನ್ನು ಸಾಧಿಸಿರುವರು, ಸಾಧಿಸಿಕೊಟ್ಟಿರುವರು.

ಶಾಸ್ತ್ರವಿಚಾರ:— ಕನ್ನಡಸಾಹಿತ್ಯದಲ್ಲಿ ಶಬ್ದದೋಷ-ಕಾವ್ಯದೋಷ ಗಳಿರಬಾರದೆಂದು ಆ ಆ ಕಾಲಕ್ಕೆ ತಕ್ಕ ವ್ಯಾಕರಣಶಾಸ್ತ್ರಗ್ರಂಥಗಳೂ ಅಲಂಕಾರ ಶಾಸ್ತ್ರಗ್ರಂಥಗಳೂ ರಚಿತವಾಗಿವೆ. ಕನ್ನಡಕ್ಕಾಗಿ ಸಂಸ್ಕೃತದಲ್ಲಿ ಬರೆದ "ಭಾಷಾಭೂಷಣ", "ಶಬ್ದಾನುಶಾಸನ" ಗಳೆಂಬ ಎರಡು ಕನ್ನಡ ವ್ಯಾಕರಣಗಳೂ, ಕನ್ನಡದಲ್ಲಿಯೇ ಬರೆದ "ಶಬ್ದಸ್ಮೃತಿ", "ಶಬ್ದಮಣಿ ದರ್ಪಣ" ಗಳೆಂಬ ಉದ್ದಾಮವಾದ ಎರಡು ಪ್ರಾಚೀನ ವ್ಯಾಕರಣಗಳೂ ಪ್ರಸಿದ್ಧವಾಗಿವೆ. ಸಂಸ್ಕೃತ ಭಾಷಾಪ್ರಿಯರಿಗೆ ಕನ್ನಡದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಕನ್ನಡವೂ ಶಾಸ್ತ್ರೀಯವಾದ ಘನತರಭಾಷೆಯೆಂಬ ವಸ್ತುಸ್ಥಿತಿ ಯನ್ನು ವ್ಯಕ್ತಪಡಿಸುವುದಕ್ಕಾಗಿಯೇ ಸಂಸ್ಕೃತದಲ್ಲಿ ಕನ್ನಡ ವ್ಯಾಕರಣಗ ಳನ್ನು ಬರೆದಿರುವುದರ ಉದ್ದೇಶವಿರಬೇಕು. ಪ್ರೌಢವಾಗಿ ಬರೆದ ಪ್ರಾಚೀನ ವ್ಯಾಕರಣಗಳು ಕನ್ನಡಕ್ಕಿರುವಂತೆ ಹಿಂದುದೇಶದ ಬೇರೆ ಯಾವ ಭಾಷೆಗೂ ಇದ್ದಂತೆ ಕಂಡುಬರುವುದಿಲ್ಲ. ಛಂದೋ ಗ್ರಂಥಗಳಿಗೂ ಕನ್ನಡದಲ್ಲಿ ಕೊರತೆ ಇಲ್ಲ. ಇನ್ನು ಲೋಕೋಪಕಾರವಾದ ವಿವಿಧ ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಹೇರಳವಾಗಿವೆ. ಜನವೈದ್ಯ, ಗೋವೈದ್ಯ, ಜ್ಯೋತಿಷ, ಗಂಭೀರವೂ ಗೌರವಾರ್ಹವೂ ಆದ ಮದನಶಾಸ್ತ್ರಗ್ರಂಥ, ೧೧ ನೆಯ ಶತಮಾನದಲ್ಲಿದ್ದ ಚಂದ್ರರಾಜನ "ಮದನತಿಲಕ", ಗಣಿತಶಾಸ್ತ್ರ, ಬಡ್ಡಿಯ ಲೆಕ್ಕಗಳನ್ನು ವಿವರಿಸುವ ವಡ್ಡವ್ಯವಹಾರಶಾಸ್ತ್ರ, ಹಯಶಾಸ್ತ್ರ, ಗಜಶಾಸ್ತ್ರ, ರತ್ನಶಾಸ್ತ್ರ, ಶಕುನಶಾಸ್ತ್ರ, ಉದಕಾರ್ಗಳ ಮುಂತಾದ ಲೆಕ್ಕವಿಲ್ಲದಷ್ಟು ಲೌಕಿಕಶಾಸ್ತ್ರ ಗ್ರಂಥಗಳೂ, ಇವಲ್ಲದೆ ಪರಮಾರ್ಥತತ್ತ್ವಪ್ರತಿಪಾದಕವಾದ ವೇದಾಂತ ಗ್ರಂಥಗಳೂ ಕನ್ನಡ ಕಾವ್ಯರೂಪದಲ್ಲಿ ರಚಿತವಾಗಿವೆ.

ಧ್ವನಿವಿಶೇಷ:— ಕಾವ್ಯವನ್ನು ಓದುವಾಗ ಮೇಲುಗಡೆ ಸಾಮಾನ್ಯವಾಗಿ ತೋರುವ ಒಂದು ಅರ್ಥದ ಜೊತೆಗೆ ಅದನ್ನೇ ಒಳಹೊಕ್ಕು ವಿಚಾರಮಾಡಿ ಓದುವಾಗ ತೋರುವ ಮತ್ತೊಂದು ಅರ್ಥವನ್ನು ಒಳ

ಕೊಂಡ "ಧ್ವನಿಕಾವ್ಯ" ಗಳು ಕನ್ನಡದಲ್ಲಿ ಕಡಿಮೆಯಾಗಿಲ್ಲ. ಪ್ರಕೃತಕ್ಕೆ ಒಂದು ಜಾತಿಯ ಅಂತಹ ಕೆಲವು ಗ್ರಂಥಗಳನ್ನು ಪರಿಶೀಲಿಸುವ. ಒಂದು ದೇಶದವರಿಗೆ ಐತಿಹಾಸಿಕ ದೃಷ್ಟಿಯಿಲ್ಲದ ಕಾರಣ ಈ ದೇಶದ ಪ್ರಾಚೀನ ಚರಿತ್ರೆಯೇ ತಿಳಿಯುವಂತಿಲ್ಲವೆಂದು ಹೊರದೇಶದವರು ದೂರುವುದು ಆಗಾಗ ಕೇಳಿಸುತ್ತಿದೆ. ತ್ರಿಕಾಲಜ್ಞಾನಿಗಳೂ, ಋಷಿಪ್ರಾಯರಾದ ಕವಿಶ್ರೇಷ್ಠರೂ, ಮಾನವನ ವೈಯಕ್ತಿಕ ಚರಿತ್ರೆಗಿಂತಲೂ ಶಾಶ್ವತವಾದ ಅವನ ಸತ್ಕಾರ್ಯಗಳ ಮೇಲೆಯೇ ದೃಷ್ಟಿಯಿಡುವ ಮನೋವೃತ್ತಿಯುಳ್ಳವರೂ ಹುಟ್ಟಿದ ಈ ದೇಶಕ್ಕೆ ಅಂತಹ ಅಪಪ್ರಥೆಯನ್ನು ಹೊರಿಸುವುದು ಸಾಹಸವೇ ಸರಿ. ಅದರ ಕೂಲಂಕಷ ವಿಚಾರವು ಇಲ್ಲಿ ಬೇಕಿಲ್ಲ. ಮೇಲೆ ಹೇಳಿದಂತೆ ಸತ್ಕಾರ್ಯದೃಷ್ಟಿಯ ಮನೋವೃತ್ತಿಯೇ ಕನ್ನಡ ಜನರಿಗೂ ಇಲ್ಲದೆ ಇರಲಿಲ್ಲ; ಆದರೂ ಕನ್ನಡಕವಿಗಳು ತಂತಮ್ಮ ಕಾಲದ ಕನ್ನಡ ರಾಜ್ಯಚರಿತ್ರೆಯನ್ನು ಒಂದಲ್ಲ ಒಂದು ವಿಧದಲ್ಲಿ ಧ್ವನಿರೂಪದಿಂದ ಹೇಳಿಯೇ ಇರುವರು. ಪಂಪಭಾರತ (ವಿಕ್ರಮಾರ್ಜುನ ವಿಜಯ), ಗದಾಯುದ್ಧ (ಸಾಹಸಭೀಮ ವಿಜಯ), ಜಗನ್ನಾಥ ವಿಜಯ, ಕಬ್ಬಿಗರಕಾವ (ಮದನ ವಿಜಯ), ಚಿಕ್ಕದೇವರಾಜ ವಿಜಯಗಳೆಂಬೀ ಐದು "ವಿಜಯ" ಗ್ರಂಥಗಳು ಭಾರತ ಭಾಗವತ ಪುರಾಣ ಕಥಾಭಾಗಗಳನ್ನು ತಿಳಿಸುವಂತೆ ಮೇಲಕ್ಕೆ ಕಂಡು ಬರುವಂತಿದ್ದರೂ, ಒಳಹೊಕ್ಕು ನೋಡಿದರೆ ಅವು ಆ ಆ ಕಾಲದ ಕನ್ನಡ ರಾಜ್ಯದ "ವಿಜಯ ಪಂಚಕ" ಗಳೆಂದು ಹೆಸರಿಡಬಹುದಾದ ಈ ಐದು ಕಾವ್ಯಗಳು ಕನ್ನಡನಾಡಿನಲ್ಲಿ ಕ್ರಿ. ಶ. ೧೦ ನೆಯ ಶತಮಾನದಿಂದ ೧೮ನೆಯ ಶತಮಾನದ ವರೆಗೆ ನಡೆದ ರಾಜ್ಯಪರಿವರ್ತನದ ಇತಿಹಾಸವನ್ನು ಸ್ಥೂಲವಾಗಿ ಸೂಚಿಸುವುವು. "ಪಂಪಭಾರತ" ವು ೧೦ ನೆಯ ಶತಮಾನದಲ್ಲಿ ರಾಷ್ಟ್ರಕೂಟರಾಜ್ಯದೊಳಗೆ ದಾಯಾದ್ಯರಿಗೆ ನಡೆದ ಯುದ್ಧವನ್ನೂ ಅದರಲ್ಲಿ ಒಂದು ಪಕ್ಷಕ್ಕೆ ಕೈಗೂಡಿದ ವಿಜಯವನ್ನೂ ಧ್ವನಿರೂಪದಿಂದ ಸೂಚಿಸುವುದು. "ಗದಾಯುದ್ಧ" ವು ೧೦ ನೆಯ ಶತಮಾನದ ಅಂತ್ಯಭಾಗದಲ್ಲಿ ರಾಷ್ಟ್ರಕೂಟರಿಗೂ ಪಶ್ಚಿಮಚಾಳುಕ್ಯರಿಗೂ ನಡೆದ ಧರ್ಮಯುದ್ಧವನ್ನೂ ಚಾಳುಕ್ಯರಿಗಾದ ವಿಜಯಪ್ರಾಪ್ತಿಯನ್ನೂ ಸೂಚಿಸುವುದು. "ಜಗನ್ನಾಥವಿಜಯ" ವು ೧೨ ನೆಯ ಶತಮಾನದಲ್ಲಿ ಪಶ್ಚಿಮ ಚಾಳುಕ್ಯರಿಗೂ ಹೊಯ್ಸಳರಿಗೂ ನಡೆದ ಯುದ್ಧವನ್ನೂ ಹೊಯ್ಸಳರಿಗೆ ವಿಜಯವಾದ ವಿಷಯವನ್ನೂ ಸೂಚಿಸುವುದು. "ಕಬ್ಬಿಗರ ಕಾವ" ವು ೧೩ ನೆಯ

ಶತಮಾನಾದಿಯಲ್ಲಿ ಹೊಯ್ಸಳರಿಗೂ ಕದಂಬ ಕುಲದವರಿಗೂ ನಡೆದ ಯುದ್ಧಯಾತ್ರೆಯನ್ನೂ ತಾತ್ಕಾಲಿಕವಾಗಿ ಕದಂಬರಿಗೆ ದೊರೆತ ಸಣ್ಣ ವಿಜಯದ ವಿಷಯವನ್ನೂ ಸೂಚಿಸುವುದು. ಮೇಲೆ ಹೇಳಿದ ನಾಲ್ಕು ಕಾವ್ಯಗಳಂತೆ "ಚಿಕ್ಕದೇವರಾಜ ವಿಜಯ"ವು ಕನ್ನಡ ರಾಜ್ಯದ ಇತಿಹಾಸವನ್ನು ಧ್ವನಿರೂಪದಲ್ಲಿಡದೆ ಸ್ಪಷ್ಟವಾಗಿಯೇ ತಿಳಿಸುವುದು; ಈ ಕಾವ್ಯವು ೧೪—೧೫ ನೆಯ ಶತಮಾನಗಳಲ್ಲಿ ವಿಜಯನಗರ ರಾಜ್ಯದಲ್ಲಿ ನಡೆದ ರಾಜವಂಶ ಪರಿವರ್ತನವನ್ನೂ, ೧೬ ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರರಾಜ್ಯವು ಮುರಿದುಬಿದ್ದ ಸಂಗತಿಯನ್ನೂ ಬಹು ಸಂಕ್ಷೇಪವಾಗಿ ತಿಳಿಸಿ, ಅನಂತರ ಮೈಸೂರರಸರು ಸಣ್ಣ ಪಾಳೆಯಪಟ್ಟದಿಂದ ಚಿಕ್ಕದೇವರಾಜನ ವರೆಗೆ ಹೇಗೆ ವಿಶಾಲವಾದ ರಾಜ್ಯವನ್ನು ಕಟ್ಟುತ್ತ ಬಂದರೆಂಬ ಸಂಗತಿಯನ್ನು ವಿಶದವಾಗಿಯೂ ತಿಳಿಸುವುದು. ಈ ರಾಜ್ಯವಿಸ್ತಾರ ಕಾಲದಲ್ಲಿ ಕನ್ನಡ ವೀರರು ಮುಸಲಮಾನರೊಡನೆಯೂ ಮರಾಟರೊಡನೆಯೂ ತೆಲುಗರೊಡನೆಯೂ ಹೇಗೆ ಹೋರಾಡಿ ವಿಜಯಲಕ್ಷ್ಮಿಯನ್ನು ಒಲಿಸಿಕೊಂಡರೆಂಬ ಸಂಗತಿಗಳು ಹೃದಯಂಗಮವಾಗಿ ವರ್ಣಿತವಾಗಿವೆ.

## ಕನ್ನಡ ಸಾಹಿತ್ಯದ ಇತಿಹಾಸ.

ಕನ್ನಡ ಸಾಹಿತ್ಯದ ಇತಿಹಾಸವು ಕನ್ನಡ ರಾಜ್ಯದ ಇತಿಹಾಸವನ್ನು ಅನುಸರಿಸಿಯೇ ಸಾಗಿದೆ. ರಾಜ್ಯದ ವೃದ್ಧಿಕ್ಷಯಗಳೊಂದಿಗೆ ಸಾಹಿತ್ಯದ ವೃದ್ಧಿಕ್ಷಯಗಳೂ ಮಾರ್ಪಟ್ಟಿವೆ. ಸ್ಥಳದಿಂದ ಸ್ಥಳಕ್ಕೆ ರಾಜ್ಯಲಕ್ಷ್ಮಿಯು ಸಂಚಾರವಾದಂತೆಲ್ಲ ಸಂಗಡವೇ ಸಾಹಿತ್ಯ ಸರಸ್ವತಿಯ ಸಂಚಾರವೂ ನಡೆದಿದೆ. ಕನ್ನಡ ಸಾಹಿತ್ಯದ ಇತಿಹಾಸಾರಂಭ ಕಾಲದಲ್ಲಿ, ಕಾವೇರೀ ಗೋದಾವರಿಗಳ ಬಳಿಯಲ್ಲಿ ತನ್ನ ಪೀಠವನ್ನು ಹಂಚಿ ನೆಲಸಿದ್ದ ಕನ್ನಡ ಸರಸ್ವತಿಯು, ಮುಂದೆ ಗೋದಾವರೀ ಕೃಷ್ಣಾನದಿಗಳ ಮಧ್ಯದಲ್ಲಿದ್ದು, ಅನಂತರ ದಕ್ಷಿಣಕ್ಕಿಳಿದು, ತರುವಾಯ ತುಂಗಭದ್ರಾತೀರ ವಾಸಸ್ಥಿತೆಯಾಗಿ, ಮತ್ತೆ ಕಾವೇರೀ ಸರಿತ್ತೀರಕ್ಕೆ ಸಾಗಿ, ಈಗ ಸುತ್ತಲೂ ದೃಷ್ಟಿಹಾಯಿಸುತ್ತಿರುವಳೆಂಬುದನ್ನು ಈ ಕೆಳಗೆ ತಿಳಿಸಿರುವ ವಿಚಾರಗಳಿಂದ ಮನಗಾಣಬಹುದು.

ಅಜ್ಞಾತಯುಗದಿಂದ ಕ್ರಿ. ಶ. ೮ ನೆಯ ಶತಮಾನದ ವರೆಗೆ:— ಕ್ರಿ. ಪೂರ್ವ ೩ ನೇ ಶತಮಾನದಲ್ಲಿ ಅಶೋಕ ಚಕ್ರವರ್ತಿಯು ವಿಂಧ್ಯ ಪರ್ವತದ ದಕ್ಷಿಣಕ್ಕಿರುವ ದೇಶಗಳ ಬಹುಭಾಗವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಆಗ ಅವನ ರಾಜಭಾಷೆಯಾದ "ಪಾಲಿ" ಗೇ ಮಹತ್ವವು ಹೆಚ್ಚುತ್ತ ದೇಶಭಾಷೆಗಳು ಮುಗ್ಗುತ್ತ ಬಂದಹಾಗೆ ತೋರುವದು. ಅಶೋಕನ ಅಜ್ಜನಾದ ಚಂದ್ರಗುಪ್ತನು ೪ ನೇ ಶತಮಾನದಲ್ಲಿ ಜೈನ ಶ್ರವಣರೊಡನೆ ಶ್ರವಣಬೆಳ್ಗೊಳದಲ್ಲಿ ನೆಲಸಿದನು. ಆಗ ಅವನ ತರುವಾಯದವರು ಬೇರೆ ಬೇರೆ ಸಂಘಗಳನ್ನು ಮಾಡಿಕೊಂಡು ಬೇರೆ ಸ್ಥಳಗಳಿಗೆ ಹೋಗಿ ನೆಲಸಲುಪಕ್ರಮಿಸಿದರು. ಆಗ ಜೈನರ ತತ್ತ್ವಾರ್ಥ ಶಾಸ್ತ್ರಗ್ರಂಥಗಳು ವಿಶೇಷವಾಗಿ ಪ್ರಾಕೃತಭಾಷೆಯಲ್ಲಿಯೂ ಅನಂತರ ಸಂಸ್ಕೃತ ಭಾಷೆಯಲ್ಲಿಯೂ ಬೆಳೆದಂತೆ ಕಂಡುಬರುವದು. ಹೀಗೆ ಕನ್ನಡವು ಸುಮಾರು ಏಳೆಂಟು ಶತಮಾನಗಳ ಕಾಲ ಬಲಗುಂದಿ ಮುಂದೆ ಕಲ್ಯಾಣದ ಚಾಲುಕ್ಯರು ಉತ್ತರದಲ್ಲಿ ಕನ್ನಡ ರಾಜ್ಯವನ್ನು ಕಟ್ಟಿದ ಬಳಿಕ ಶಾಸನರೂಪದಲ್ಲಿ ಮತ್ತೆ ಚಿಗಿಯಲಾರಂಭಿಸಿತು. ಆಗ ಅದಕ್ಕೆ ರಾಜಾಶ್ರಯವು ದೊರೆಯಹತ್ತಿತು. ೮ ನೇ ಶತಮಾನದಲ್ಲಿ ಜೈನ ಧರ್ಮಾವಲಂಬಿಗಳಾದ ರಾಷ್ಟ್ರಕೂಟರಿಂದ ಚಾಲುಕ್ಯ ರಾಜ್ಯವು ಕೊನೆಗಂಡರೂ ಕೂಡ ಕನ್ನಡನುಡಿಯ ಏಳಿಗೆಗೆ ಕುಂದುತಟ್ಟಲಿಲ್ಲ

ಕ್ರಿ. ಶ. ೮ ರಿಂದ ೧೦ ನೇ ಶತಮಾನದವರೆಗೆ:— ಈ ಕಾಲದಲ್ಲಿ ಶಂಕರಾಚಾರ್ಯರಿಂದ ವೈದಿಕಮತವು ತಲೆಯೆತ್ತಿತು. ಆಗ ಇದರಿಂದ ಜೈನಮತ ಪ್ರಚಾರಕ್ಕೆ ಅಡ್ಡಿ ಬಂದಂತಾಯಿತು. ಆದಕಾರಣ ಜೈನರು ಜನಸಾಮಾನ್ಯಕ್ಕೆ ತಿಳಿಯದ ಪ್ರಾಕೃತ ಸಂಸ್ಕೃತಗಳನ್ನು ಬಿಟ್ಟು ದೇಶ ಭಾಷೆಯ ಮೂಲಕ ಮತಪ್ರಚಾರ ಮಾಡಬೇಕಾಯಿತು. ಕನ್ನಡ ಪ್ರಚಾರವು ಈ ೨೦೦ ವರ್ಷಕಾಲದಲ್ಲಿ ಅಭೂತಪೂರ್ಣವಾದ ಪರಿಸ್ಥಿತಿಯನ್ನು ಕಲ್ಪಿಸಿತು. ಉತ್ತರದಲ್ಲಿ ಪಂಪ, ಪೊನ್ನ, ರನ್ನರಂತಹ, ದಕ್ಷಿಣದಲ್ಲಿ ಗುಣವರ್ಮ, ಚಾವುಂಡರಾಯರಂತಹ ಜೈನಪುರಾಣ ಕವಿಪುಂಗರವರು ಬೆಳಗಿದರು. ನೃಪತುಂಗ ನಾಗವರ್ಮರಂಥ ಅಲಂಕಾರ ಮತ್ತು ಛಂದಶ್ಶಾಸ್ತ್ರಕಾರರೂ ಉದಯವಾದರು. ಪಂಪ ಪೊನ್ನ, ರನ್ನರು ರತ್ನತ್ರಯರೆಂದು ಹೆಸರುಗೊಂಡಿದ್ದಾರೆ. ಚಕ್ರವರ್ತಿಗಳ ಆಶ್ರಯದಲ್ಲಿ ಲೌಕಿಕ ಕಾವ್ಯಗಳನ್ನು ಬರೆದ ಪೊನ್ನರನ್ನರು ಕವಿಚಕ್ರವರ್ತಿಗಳೆಂದು ಪ್ರಖ್ಯಾತರಾದರು.

೧೧ ನೆಯ ಶತಮಾನಃ— ಈ ಶತಮಾನದ ಆದಿಯಲ್ಲಿ ಶೈವರಾದ ಚೋಳರಾಜರು, ದಕ್ಷಿಣ ಕರ್ನಾಟಕದಲ್ಲಿ ನುಗ್ಗಿ ಪುಲಿಗೆರೆಯ ವರೆಗೂ ಜೈನರ ಮಠಗಳನ್ನೂ ಬಸದಿಗಳನ್ನೂ ಹಾಳುಮಾಡಿದರು. ಈ ಕಾರಣ ದಿಂದ ಇಲ್ಲಿ ಕನ್ನಡಸಾಹಿತ್ಯ ಸೇವೆಗೆ ಭಂಗವುಂಟಾಯಿತು. ಆದರೆ ಉತ್ತ ರದಲ್ಲಿ ಚಾಳುಕ್ಯರಾಜರ ಆಶ್ರಯದಿಂದ ನಾಗವರ್ಮನ ಕಾದಂಬರಿ, ದುರ್ಗಸಿಂಹನ ಪಂಚತಂತ್ರ, ಚಂದ್ರರಾಜನ ಮದನತಿಲಕಗಳೆಂಬ ಕನ್ನಡ ಚಂಪೂಗ್ರಂಥಗಳು ಹುಟ್ಟಿದವು. ಆದರೆ ೧೧ ನೇ ಶತಮಾನದ ಪೂರ್ವಾರ್ಧದ ಅಂತ್ಯದಲ್ಲಿ ಚೋಳರನ್ನು ಉತ್ತರದಲ್ಲಿ ಚಾಳುಕ್ಯರೂ ದಕ್ಷಿಣದಲ್ಲಿ ಹೊಯ್ಸಳರೂ ಒಕ್ಕಲಿಕ್ಕಿದರು. ಆಗ ಜೈನರು ಪುನಃ ಚೇತ ರಿಸಿಕೊಳ್ಳುವಂತೆ ಆಯಿತು. ಈ ಶತಮಾನದಲ್ಲಿಯೇ ಶ್ರೀಧರಾಚಾರ್ಯನ ಜಾತಕ ತಿಲಕವೂ ನಾಗವರ್ಮಾಚಾರ್ಯನ ಚಂದ್ರಚೂಡಾಮಣಿಶತ ಕವೂ ರಚಿತವಾದವು ಈ ಶತಮಾನದ ಸಾಹಿತ್ಯದ ವೈಲಕ್ಷಣ್ಯವೇ ನೆಂದರೆಃ— ಕಾವ್ಯಗಳು ಕಾವ್ಯೋದ್ದೇಶದಿಂದಲೇ ಹುಟ್ಟಿದವು, ಮತ ಪ್ರಚಾರಕ್ಕಾಗಿ ಹುಟ್ಟಲಿಲ್ಲ. ಜನಮನೋರಂಜಕವಾದ ಕಥೆಗಳನ್ನೂ ರಾಜನೀತಿ, ಲೌಕಿಕನೀತಿ, ಶಾಸ್ತ್ರ ವಿಷಯಗಳನ್ನೂ ಒಳಕೊಂಡ ಗ್ರಂಥ ಗಳು ಲಲಿತಶೈಲಿಯಿಂದ ನಿರ್ಮಿತವಾದವು.

೧೨ ನೇ ಶತಮಾನದ ಸಾಹಿತ್ಯಃ— ಈ ಶತಮಾನದ ಆರಂಭದಲ್ಲಿ ಕಾವ್ಯಗಳ ಶೈಲಿಯಲ್ಲಿ ೧೧ ನೇ ಶತಮಾನದ ಲಾಲಿತ್ಯವೇ ಹರಿಯುತ್ತಿದೆ. ಇದಕ್ಕೆ ನಾಗಚಂದ್ರನ ಪಂಪ ರಾಮಾಯಣ, ಬ್ರಹ್ಮಶಿವನ ಸಮಯ ಪರೀಕ್ಷೆ, ನಯಸೇನನ ಧರ್ಮಾಮೃತ, ಎಂಬೀ ಮೂರು ಗ್ರಂಥಗಳನ್ನು ಉದಾಹರಿಸಬಹುದು. ಮುಂದೆ ಚಾಳುಕ್ಯರ ರಾಜ್ಯವನ್ನು ಕಳಚೂರ್ಯ ಕುಲದ ಬಿಜ್ಜಳನು ಆಕ್ರಮಿಸಿದನು. ಇವನ ಬಳಿಯಲ್ಲಿ ಮಹಾನುಭಾ ವನಾದ ಬಸವನು ಭಂಡಾರಿಯಾಗಿದ್ದನು. ಇದೇ ಕಾಲದಲ್ಲಿ ಇವನಿಂದ ಸ್ಥಾಪಿತವಾದ ಶಿವಾನುಭವಮಂಟಪದಲ್ಲಿ ಬಸವ, ಚೆನ್ನಬಸವ, ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ ಮುಂತಾದ ಶಿವಶರಣರು ಸೇರಿ ಆಗ ಸಮಾ ಜದಲ್ಲಿಯೂ ಧರ್ಮದಲ್ಲಿಯೂ ತಲೆದೋರಿದ್ದ ಅವ್ಯವಸ್ಥೆಗಳನ್ನೂ ಅವುಗಳ ನಿವಾರಣೋಪಾಯಗಳನ್ನೂ ಸಮಾಜೋದ್ಧಾರ ವಿಚಾರಗಳನ್ನೂ ಚರ್ಚಿಸಿ ವಾಕ್ಯಾರ್ಥ ಮಾಡುತ್ತಿದ್ದರು. ಈ ವಾಕ್ಯಾರ್ಥ ಮಥನದಲ್ಲಿ ತೇಲಿ ಬಂದ ನವನೀತವೇ ವಚನಾಮೃತವು. ಇದನ್ನು ಕರ್ನಾಟಕೋಪನಿಷತ್

ಕಾಲವೆಂದು ಕರೆಯಬಹುದು. ಇದು ಆಚ್ಯ ಕನ್ನಡಿಗರಿಂದ ಕನ್ನಡದ ಹುಟ್ಟು ಗುಣವನ್ನು ತೋರಪಡಿಸಿಕೊಂಡು ಹುಟ್ಟಿ ಬಂದ ವಚನರಾಶಿ; ಗದ್ಯಮಾಲೆಯ ಮುಸುಕಿನಲ್ಲಿ ಕಂಪರಿಯುವಂತೆ ಛಂದೋಬದ್ಧವಾಗಿ ಹುಕ್ಕಿಬಂದ ವಚನ ಲಹರಿ; ಪಾಮರಗಣೋದ್ಧಾರಕ್ಕಾಗಿ ಸಿದ್ಧಾಂತಾತಗಣದಿಂದ ಸೂಚಿಸಿಕೊಟ್ಟ ವಚನ ರಚನೆ. ಈ ವಚನಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯ ಯೋಗಾಂಗಗಳ ಸದ್ಬೋಧೆಗಳು ಅಡಕವಾಗಿವೆ. ಕನ್ನಡದಲ್ಲಿಯ ವಿಲಕ್ಷಣವಾದ ಈ ವಚನ ಮಾರ್ಗವನ್ನು ಇತರ ಭಾಷೆಗಳಲ್ಲಿ ಕಾಣುವದರಿದು. ವಚನಕಾರರ ತರುವಾಯ ಸ್ವಲ್ಪ ವರ್ಷಗಳಲ್ಲಿ ಹರಿಹರ ರಾಘವಾಂಕರೆಂಬ ವೀರಶೈವ ಕವಿಗಳು ಪ್ರಸಿದ್ಧರಾದರು. ಹರಿಹರನ ಕಾವ್ಯಗಳಲ್ಲಿ ಭಕ್ತ್ಯಾವೇಶವು . ತೊರಹೊಮ್ಮುತ್ತಿರುವದು. ಗಿರಿಜಾ ಕಲ್ಯಾಣವೆಂಬ ಚಂಪೂ ಕಾವ್ಯವನ್ನೂ ಹಲವು ರಗಳೆಗಳನ್ನೂ ಬರೆದಿರುವನು. ರಾಘವಾಂಕನು ತನ್ನ ಕಾವ್ಯಗಳನ್ನು ಷಟ್ಪದಿಯಲ್ಲಿಯೇ ಬರೆದಿರುವನು. ಹೀಗೆ ಷಟ್ಪದಿ ರೂಪದಿಂದಲೇ ಕಾವ್ಯವನ್ನು ಬರೆದವರು ಇವನ ಹಿಂದೆ ಮತ್ತಾರೂ ಇದ್ದುದು ಇದು ವರೆಗೆ ತಿಳಿದುಬಂದಿಲ್ಲ. ಈ ಶತಮಾನದ ಕೊನೆಯ ೩೦ ವರ್ಷಗಳಲ್ಲಿ ನೇಮಿಚಂದ್ರ, ರುದ್ರಭಟ್ಟ, ಅಗ್ಗಳ ಇವರು ಲೀಲಾವತಿ,' ಜಗನ್ನಾಥ ವಿಜಯ, ಚಂದ್ರಪ್ರಭ ಪುರಾಣಗಳೇ ಮೊದಲಾದ ಉದ್ದಾಮ ಚಂಪೂಕಾವ್ಯಗಳನ್ನು ರಚಿಸಿದರು. ಈ ಕಾಲದ ಕಾವ್ಯಗಳು ಸಂಸ್ಕೃತಪದಭೂಯಿಷ್ಠವಾಗಿ ಕ್ಲಿಷ್ಟಶೈಲಿಯಲ್ಲಿವೆ. ಇದನ್ನು ಹೊಯ್ಸಳರ ಕಾಲವೆಂದು ಕರೆಯಬಹುದು.

೧೩ ನೇ ಶತಮಾನ (ಹೊಯ್ಸಳರ ಕಾಲವೇ ಮುಂದುವರಿದುದು):— ಇದರ ಬಹುಭಾಗದ ವರೆಗೂ ಕನ್ನಡ ಸಾಹಿತ್ಯವು ಹೊಯ್ಸಳರ ಆಶ್ರಯದಲ್ಲಿಯೇ ಬೆಳೆಯುತ್ತ ನಡೆಯಿತು. ಈ ಕಾಲದ ಪ್ರಧಾನಕವಿಗಳೆಂದರೆ— ಕವಿ ಚಕ್ರವರ್ತಿ ಜನ್ನ, ಕಬ್ಬಿಗರ ಕಾವ್ಯವನ್ನು ಬರೆದ ಆಂಡಯ್ಯ, ದಶಕುಮಾರಚರಿತೆಯನ್ನು ಬರೆದ ಚೌಂಡರಸ, ಶಬ್ದ ಮಣಿದರ್ಪಣವನ್ನು ಬರೆದ ಕೇಶಿರಾಜ ಇವರೇ ಇದ್ದಾರೆ. ಕಡೆಕಡೆಗೆ ಹೊಯ್ಸಳರು ರಾಜಕೀಯ ವ್ಯವಹಾರಗಳಲ್ಲಿ ತೊಡಕಬೇಕಾದ ಕಾರಣ ಈ ಶತಮಾನದ ಕೊನೆಯ ಭಾಗದಲ್ಲಿ ಸಾಹಿತ್ಯವು ಬೆಳೆಯಲು ಅನುವಾಗಲಿಲ್ಲ.

೧೪ ನೇ ಶತಮಾನ (ಕನ್ನಡ ಸಾಹಿತ್ಯಕ್ಕೆ ಅಂಧಕಾರ ಕಾಲ):— ಈ ಶತಮಾನದ ಆರಂಭದಲ್ಲಿ ಕನ್ನಡ ಸಾಹಿತ್ಯಸೂರ್ಯನು ಅಂಧಕಾರ

ಸದಾಶಿವರಾಯನೂ ಶಿವತತ್ತ್ವರತ್ನಾಕರವೆಂಬ ವಿಶ್ವಕೋಶವನ್ನು ಬರೆದ ಕೆಳದಿಯ ಬಸವರಾಜನೂ ಬಹುಜನ ಪಂಡಿತರಿಗೆ ಆಶ್ರಯಕೊಡುತ್ತಿದ್ದರು.

ಮೈಸೂರರಸರ ಕಾಲ:— ೧೭ ನೇ ಶತಮಾನದ ಉತ್ತರಾರ್ಧ ಕಾಲಕ್ಕೆ ಮೈಸೂರರಸರು ತಮ್ಮ ರಾಜ್ಯವನ್ನು ಹೆಚ್ಚಿಸಿಕೊಂಡು ಕ್ರಮಕ್ರಮವಾಗಿ ಪ್ರಸಿದ್ಧಿಗೆ ಬಂದರು. ಈ ಉತ್ಕರ್ಷವು ಚಿಕ್ಕದೇವರಾಜನ ಕಾಲಕ್ಕೆ ಶಿಖರವನ್ನು ಮುಟ್ಟಿತು. ಈ ಕಾಲದ ಸಾಹಿತ್ಯದಲ್ಲಿ ಪೂರ್ವಕಾಲದ ಸಾಹಿತ್ಯವೈಭವದ ಪುನರುದ್ಧಾರಪ್ರಯತ್ನವನ್ನು ನೋಡಬಹುದು. ಇಂತಹ ಪ್ರಯತ್ನಶೀಲರಲ್ಲಿ ರಾಜಶೇಖರವಿಲಾಸ ಮೊದಲಾದ ಕಾವ್ಯಗಳನ್ನು ಬರೆದ ಷಡಕ್ಷರಿಯೇ ಮೊದಲಿಗನು. ಈ ಕಾಲದ ಸಾಹಿತ್ಯದಲ್ಲಿ ವಿಷಯವೈವಿಧ್ಯವೂ ರಚನಾವೈವಿಧ್ಯವೂ ಐತಿಹಾಸಿಕ ದೃಷ್ಟಿಯೂ ಒಟ್ಟಾಗಿ ಮುಪ್ಪುರಿಗೊಂಡಿವೆ. ವಿಷ್ಣುಭಕ್ತಿಪರವಾದ ಹಲವು ಗ್ರಂಥಗಳು ಹುಟ್ಟಿದವು. ಈ ಕಾಲದ ಮುಖ್ಯ ಕವಿಗಳೆಂದರೆ:— ಚಿಕ್ಕದೇವರಾಜ ವಂಶಾವಳಿ ಮೊದಲಾದ ಗ್ರಂಥಗಳನ್ನು ಬರೆದ ತಿರುಮಲಾರ್ಯ ಮಿತ್ರವಿಂದಾಗೋವಿಂದನಾಟಕವನ್ನು ಬರೆದ ಇವನ ತಮ್ಮ ಸಿಂಗರಾರ್ಯ, ಲೆಕ್ಕವಿಲ್ಲದ ಗ್ರಂಥಗಳನ್ನು ಬರೆದ ಚಿಕುಪಾಧ್ಯಾಯ ಇವರಲ್ಲದೆ ಹದಿಬದೆಯ ಧರ್ಮವನ್ನು ಬರೆದ ಸಂಚಿಯ ಹೊನ್ನಮ್ಮ ಇವರೇ ಅಗ್ರಗಣ್ಯರಾಗಿರುವರು.

೧೮ ನೇ ಶತಮಾನದ ಪೂರ್ವಾರ್ಧದಲ್ಲಿ ಮೈಸೂರರಸರ ಆಶ್ರಯದೊಳಗೆ ಕನ್ನಡ ಸಾಹಿತ್ಯವು ಹಿಂದಿನಂತೆಯೇ ಬೆಳೆಯಿತು. ಯಕ್ಷಗಾನ ಗ್ರಂಥಗಳು ಬೆಳೆದವು. ಮೈಸೂರು ಕೊಡಗು ರಾಷ್ಟ್ರಗಳ ಇತಿಹಾಸವನ್ನು ತಿಳಿಸುವ ಗ್ರಂಥಗಳು ಹೆಚ್ಚಾದವು. ಈ ಶತಮಾನದ ಉತ್ತರಾರ್ಧದಲ್ಲಿ ಮೈಸೂರುರಾಜ್ಯವು ಹೈದರ ಟಿಪ್ಪುಗಳ ಕೈಗೆ ಸಿಕ್ಕಿತು. ಆಗ ಕನ್ನಡ ಸಾಹಿತ್ಯವು ತಕ್ಕಂತೆ ಹುಟ್ಟಲಿಲ್ಲ. ಆದರೆ ಉತ್ತರದಲ್ಲಿ ಜಗನ್ನಾಥದಾಸ ತಿಮ್ಮಣ್ಣದಾಸರೇ ಮುಂತಾದ ಹರಿದಾಸರು ವೈಷ್ಣವ ತತ್ತ್ವವನ್ನು ಹರಡಿದರು.

೧೯ ನೇ ಶತಮಾನದ ಪೂರ್ವಾರ್ಧದಲ್ಲಿ ಮೈಸೂರು ರಾಜ್ಯವು ಮತ್ತೆ ಅರಸುಮನೆತನದವರ ಕೈಸೇರಿತು. ಈ ಕಾಲದಲ್ಲಿ ಮುಮ್ಮಡಿ ಕೃಷ್ಣರಾಜರ ಉದಾರಾಶ್ರಯದಲ್ಲಿ ಹಲವು ಸಂಸ್ಕೃತ ಗ್ರಂಥಗಳೂ ಯಕ್ಷ

ಗಾನ ಪ್ರಸಂಗಗಳೂ ಬಹಳವಾಗಿ ಪ್ರಚಾರಕ್ಕೆ ಬಂದವು. ನಾರಾಯಣ ಭಟ್ಟನ ಮುದ್ರಾ ಮಂಜೂಷವೂ ದೇವಚಂದ್ರನ ರಾಜಾವಳೀ ಕಥೆಯೂ ರಚಿತವಾದವು.

ಮೈಸೂರು ಬ್ರಿಟಿಶ್ ಕರ್ನಾಟಕಗಳ ಕಾಲಃ— ೧೯ ನೇ ೨೦ ನೇ ಶತಮಾನಗಳಲ್ಲಿ ಶಾಕುಂತಲವನ್ನು ಪರಿವರ್ತಿಸಿದ ಬಸವಪ್ಪ ಶಾಸ್ತ್ರಿ, ರಾಮಾಶ್ವಮೇಧವನ್ನು ಬರೆದ ನಂದಳಿಕೆ ಲಕ್ಷ್ಮೀನಾರಣಪ್ಪ ಅನೇಕ ಕಾದಂಬರಿಗಳನ್ನು ಬರೆದ ಬಿ. ವೆಂಕಟಾಚಾರ್ಯ ಮೊದಲಾದವರು ಸುಪ್ರಸಿದ್ಧ ಗದ್ಯಗ್ರಂಥಗಳನ್ನು ಬರೆದರು. ಅಲ್ಲದೆ ಕಿಟಲ್ ರೈಸ, ಝಿಗಲರ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಕನ್ನಡವನ್ನು ವ್ಯಾಸಂಗಮಾಡಿ ಬಹುವಿಧದಿಂದ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿರುವರು. ಉತ್ತರ ಕರ್ನಾಟಕದಲ್ಲಿ ಶೆಕ್ಸಪೀಯರನ ಗ್ರಂಥಗಳನ್ನು ಭಾಷಾಂತರಿಸಿದ ಚನಬಸಪ್ಪ ಧಾರವಾಡ, ವೆಂಕಟ ರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತೂರಮರಿ, ಮುಳಬಾಗಲ, ಗದಿಗಯ್ಯ ಹೊನ್ನಾಪುರಮಠ, ವಾಸುದೇವಾಚಾರ್ಯ ಕೆರೂರ ಮೊದಲಾದವರು ಅನೇಕ ಗದ್ಯಗ್ರಂಥಗಳನ್ನು ಬರೆದಿರುವರು.

## ಉಪಸಂಹಾರ.

ಹೀಗೆ ಕನ್ನಡ ಸಾಹಿತ್ಯವು ಪ್ರಾಚೀನತೆಯಲ್ಲಿ, ವಿಷಯ ವಿವಿಧತೆಯಲ್ಲಿ, ಕವಿ ಹೃದಯ ವಿಕಾಸದಲ್ಲಿ, ಸತ್ಯಜ್ಞಾನಾನಂದ ಸ್ವರೂಪ ಪ್ರಕಾಶದಲ್ಲಿ ಯಾವ ದೇಶಭಾಷೆಗೂ ಕೀಳಾಗಿಲ್ಲ. ಈ ಸಾಹಿತ್ಯದ ಕೈಗನ್ನಡಿಯಲ್ಲಿ ಜನಜೀವನಕ್ರಮ, ಅವರ ಮನೋವೃತ್ತಿ, ಮಾನಸಿಕೋನ್ನತಿ, ಆತ್ಮೋನ್ನತಿ, ಹೃದಯ ಪರಿಪಾಕ ಇವುಗಳಿಗೆ ಸಂಬಂಧಪಟ್ಟ ಸಂಗತಿಗಳನ್ನೆಲ್ಲ ನೋಡಬಹುದು. ಬೆಳೆಯುತ್ತಿರುವ ಪ್ರಪಂಚದಲ್ಲಿ ಭಿನ್ನ ಭಿನ್ನ ಮಾನವ ವರ್ಗದ ಸಂಸರ್ಗದ ಫಲವಾಗಿ ಕನ್ನಡಿಗರು ತಮ್ಮ ಕಾವ್ಯ ಭಂಡಾರಕ್ಕೆ ತುಂಬಬಹುದಾದ ಸಾರವಸ್ತುಗಳನ್ನೆಲ್ಲ ತುಂಬುತ್ತಲೇ ಬಂದಿರುವರು. ತಮ್ಮ ಹಿರಿಯರು ಗಳಿಸಿಟ್ಟ ಅಮೋಘವಾದ ಈ ಆಸ್ತಿಯನ್ನು ಭದ್ರವಾಗಿ ಕಾಪಾಡಿ ಹಿಂದಿನವರಂತೆಯೇ ಮುಂದೆಯೂ ಅದನ್ನು ಬೆಳೆಯಿಸಿಕೊಂಡು ಬರುವುದು ಮುಂದಿನ ಪೀಳಿಗೆಯವರ ಕರ್ತವ್ಯವಾಗಿದೆ.

---

# ಬೆಳ್ಳಿಯ ಚಿಕ್ಕೆ.

'ಸರಲಾಕ್ಷ ಹುಲಿವಿಾಸೆ'ಯು ಧೂರ್ತನಾದ ಚೋರ ಶೋಧಕನು; ಅವನ ದಕ್ಷತೆಯಿಂದಲೂ, ಚಾತುರ್ಯದಿಂದಲೂ, ಶೋಧಕಶಕ್ತಿಯಿಂದಲೂ, ರಾಮರಾಜನ ರಾಜ್ಯದಲ್ಲಿ ನಡೆದುಹೋದ ಅನೇಕವಾದ ಕೊಲೆ ಸುಲಿಗೆ-ಮೋಸ ಮೊದಲಾದ ದುಷ್ಕೃತಿಗಳ ತುಬ್ಬು ತತ್ಕಾಲವೇ ಸಿಕ್ಕುತ್ತಿರುವುದರಿಂದ, ಆ ರಾಜ್ಯದಲ್ಲಿ ಪಾಪಾತ್ಮರಿಗೆ ಕಾಲೂರಿ ನಿಲ್ಲಲು ಸ್ಥಳವಿಲ್ಲದಂತಾಗಿತ್ತು; ಇಂತಹ ಸ್ಥಳದಲ್ಲಿ ಇಂತಹ ದಿವಸ ಇಂತಹದೊಂದು ಅಪಕೃತ್ಯವಾಯಿತೆಂಬ ವಾರ್ತೆಯು ಹುಲಿಮೀಸೆಯ ಕಿವಿಗೆ ಬಿದ್ದರಾಯಿತು; ಅದನ್ನು ಮಾಡಿದವರಾರು, ಅವರಾ ಕೃತ್ಯವನ್ನಾವ ಚಮತ್ಕಾರವಾದ ರೀತಿಯಿಂದ ಮಾಡಿದರೆಂಬ ಮಾತಿನ ಎಳೆಯನ್ನು ಅವನು ಸಂಗಡಲೇ ಹಿಡಿದುಕೊಂಡನೇ. ರಾಜಧಾನಿಯಲ್ಲಿ ಕಳ್ಳರಾರು, ಸುಳ್ಳರಾರು, ಮೋಸಗಾರರಾರೆಂಬುದರ ಎಣಿಕೆಯನ್ನು ನಿರಲಸನಾದ ಆ ಕಾರ್ಯದಕ್ಷನು ಕಟ್ಟಿಕೊಂಡೇ ಇರುವನು. ಆದರೂ ನಗರರಕ್ಷಕರ ದಕ್ಷತೆಯು ಅಧಿಕಾಧಿಕವಾದಂತೆಯೇ, ಕಳ್ಳರಾದರೂ ಹೆಚ್ಚಾದ ಜಾಣ್ಮೆಯಿಂದ ತಮ್ಮ ಕುಕರ್ಮಗಳನ್ನು ನಿರ್ವಿಘ್ನವಾಗಿ ಸಾಧಿಸಿಕೊಳ್ಳುವುದು ಸಹಜವಾದುದು. ಕುಕರ್ಮಗಳ ಶೋಧವನ್ನು ಶಾಸ್ತ್ರಾನುರೋಧವಾಗಿ ನಡೆಯಿಸಿದ ಪ್ರಮಾಣದಿಂದಲೇ ಕಳ್ಳರಾದರೂ ರಸಾಯನಶಾಸ್ತ್ರ, ವೈದ್ಯಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ-ಗಳ ಸಹಾಯದಿಂದ ಲೋಕವು ಬೆರಗಾಗುವಂತೆ ತಮ್ಮ ಚೌರಕರ್ಮಗಳನ್ನು ಮಾಡಿತೋರಿಸುವರು. ಹುಲಿಗಳು ಹೆಚ್ಚಾಗಿರುವ ನಾಡುಗಳಲ್ಲಿಯೇ ಆ ಶ್ವಾಪದಗಳಿಗೆ ಬಾಯ್ತಡೆಯನ್ನು ಮಾಡಬಲ್ಲವರಾದ ನಿಪುಣರು ಹುಟ್ಟುವಂತೆ, ರಾಮರಾಜನ ರಾಜ್ಯದಲ್ಲಿ ಕಳ್ಳರಿಗೆ ಹಗೆಯಾದ ಹುಲಿಮೀಸೆಯು ಹುಟ್ಟಿ, ಆ ಅಪರಾಧಿಗಳ ಕುಕರ್ಮಗಳೆಲ್ಲವನ್ನೂ ಬಯಲಿಗೆ ತಂದು ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿದನು.

ಹುಲಿಮೀಸೆಯು ಅಗಾಧಬುದ್ಧಿಯುವನು. ಗಣಿತ-ರಸಾಯನ ಶಾಸ್ತ್ರಗಳಲ್ಲಿ ಅವನಿಗೆ ಮಿತಿಮೀರಿದ ಮೆಚ್ಚುಗೆ. ತರ್ಕದಲ್ಲಿಯಾವನೂ ಅವ

ನೊಳ್ಳಿಯು ಗಟ್ಟಿಗನು. ಜನರ ಗುಣಾವಗುಣಗಳನ್ನು ಬಹು ಸೂಕ್ಷ್ಮ ವಾಗಿ ನಿರೀಕ್ಷಿಸುವುದು ಅವನ ಸ್ವಭಾವ ಗುಣವೇ ಆಗಿತ್ತು. ತೆಳುವಾದ ಮೈಕಟ್ಟಿನವನಾಗಿದ್ದರೂ ಅವನು ಸಮರ್ಥನು. ಸರ್ಪದಂತೆ ತೀಕ್ಷ್ಣವಾದ ಕಣ್ಣುಗಳುಳ್ಳವನಾದ ಅವನು, ಹೋಗುಹೋಗುವಾಗಲೇ, ಅಲ್ಲಲ್ಲಿಯ ಚರಾಚರವಸ್ತುಗಳ ಸ್ವರೂಪವನ್ನು ಕಂಡುಕೊಳ್ಳುವನು. ಅಂತಹ ಚಮತ್ಕಾರವಾದ ವ್ಯಕ್ತಿಯ ಚಿತ್ತವೃತ್ತಿಯು ವಿಲಕ್ಷಣವಾದುದಾಗಿತ್ತೆಂಬುದು ಆಶ್ಚರ್ಯದ ಮಾತಲ್ಲ. ಆಟ-ನೋಟ-ವಿನೋದ ಮುಂತಾದವುಗಳು ಅವನಿಗೆ ಸೇರುತ್ತಿದ್ದರೂ ಅವುಗಳಲ್ಲಿಯೆ ಅವನು ಹೊತ್ತುಗಳೆದವನಲ್ಲ; ಜನರೊಡನೆ ವಿಶೇಷವಾಗಿ ಕೂಡಿ ಆಡಿದವನಲ್ಲ; ಅವನು ದೃಢಾಂಗನಾಗಿದ್ದರೂ ವ್ಯಾಯಾಮಗಳಲ್ಲಿ ಅವನಿಗೆ ಸೇರಿಕೆಯಿರಲಿಲ್ಲ. ಗಹನ ವಿಚಾರದಲ್ಲಿರುವಾಗ ಎಡಬಲದಲ್ಲಿ ನಡೆದಿರುವ ಸಂಗತಿಗಳ ಅರಿವೇ ಅವನಿಗಿರುತ್ತಿದ್ದಿಲ್ಲ. ಇಂತಹ ಸ್ಥಿತಿಯಲಿರುವಾಗ ಹುಲಿಮಿಾಸೆಯು ಹೊಗೆಸೊಪ್ಪನೊಂದನ್ನು ಮಾತ್ರ ಬಲು ಹುರುಪಿನಿಂದ ಸೇದುವನು. ಮನೆಗೆಲ್ಲಿಯೋ ಬೆಂಕಿಬಿದ್ದಿರುವಂತೆ ಅವನಿರುವ ಕೋಣೆಯಲ್ಲಿ ಹೊಗೆಯು ತುಂಬಿರುವಾಗ, ಹುಲಿಮಿಾಸೆಯ ತರ್ಕಗಳು ತಡೆಯಿಲ್ಲದೆ ನಡೆದಿರುವುವೆಂಬುದು ನಿಶ್ಚಯ.

ನಾನು (ವೈದ್ಯ ವಾತಾತ್ಮಜ ಪಂಡಿತ) ಸರಲಾಕ್ಷರಾಯನ ಪರಮ ಶಿಷ್ಯನು. ನನ್ನ ಉದ್ಯೋಗದಿಂದ ಯೋಗಕ್ಷೇಮವು ಅವಿಚ್ಛಿನ್ನವಾಗಿ ಸಾಗುತ್ತಿದ್ದರೂ, ಸರಲಾಕ್ಷನು ಕುಕರ್ಮಗಳ ತುಬ್ಬನ್ನು ಹೇಗೆ ತೆಗೆಯುತ್ತಿರುವನೆಂಬುದರ ಅನುಭವವನ್ನು ಕಂಡುಕೊಳ್ಳುವ ಲವಲವಿಕೆಯು ನನಗೆ ಹೆಚ್ಚಾಗಿರುವುದರಿಂದ, ನಾನು ಅವನ ಅನುಯಾಯಿಯಾಗಿದ್ದೆನು. ಒಂದು ದಿನ ನಾನು ಹುಲಿಮಿಾಸೆ ಸರಲಾಕ್ಷನ ಮನೆಗೆ ಹೋದಾಗ, ಅವನ ಕೋಣೆಯಲ್ಲಿ ದಟ್ಟಾದ ಹೊಗೆಯು ಮುತ್ತಿತ್ತು. ಅವನಾವುದಾದರೊಂದು ಗಹನವಾದ ವಿಚಾರದಲ್ಲಿ ನಿಮಗ್ನನಾಗಿರುವನೆಂಬುದು ನಿರ್ವಿವಾದವು! ಒಳಗೆ ಹೋಗಿ ನೋಡಲಾಗಿ, ಆ ಮೂರ್ತಿಯು ಸಮಾಧಿಸ್ಥವಾಗಿ ಕುಳಿತಿತ್ತು. ನಾನು ಹೇಕರಿಸಿದೆನು, ಹುಂಕರಿಸಿದೆನು. ಸರಲಾಕ್ಷನು ನನ್ನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಇತ್ತ ಕಡೆಯ ಪ್ರಜ್ಞೆಯೇ ಅವನಿಗಿರಲಿಲ್ಲ, ನೋಡುವನ್ನೆಲ್ಲಿಂದ? ನಾನೊಂದು ದಿಂಬಕ್ಕೆ ಆತುಕೊಂಡು ಅರಿಗಳಿಗೆ ಸುಮ್ಮನೆ ಕುಳಿತೆನ. ಹುಲಿಮಿಾಸೆಪ್ಪನವರ ಸಮಾಧಿಯ ಬಿಗಿಯು ಸಡಿಲಾದಂತೆ ಕಂಡಿತು.

"ಏಕೆ ರಾಯರೆ? ಗಹನವಾದ ವಿಚಾರವು ನಡೆದಂತೆ ಕಾಣುತ್ತಿದೆ!" ಎಂದು ನಾನು ಗಟ್ಟಿಸಿ ಕೇಳಿದೆನು.

"ಓ! ವೈದ್ಯರಾಜ! ಯಾವಾಗ ಆಗಮನ?" ಎಂದು ಅವನು ತಟ್ಟನೆ ಎಚ್ಚತ್ತವನಾಗಿ ನನ್ನನ್ನು ಕೇಳಿದನು.

"ಒಂದು ಅರ್ಧ ಘಟಿಕೆಯಾಯಿತು. ಸುಭೇದಾರ ರಾಸಬಿಹಾರಿ ಯವರ ಕುದುರೆಯ ಪ್ರಕರಣವನ್ನು ಕುರಿತು ಆಲೋಚಿಸುತ್ತಿದ್ದೀರೋ?"

"ಸರಿ! ವಾತಾತ್ಮಜ ಪಂಡಿತ, ದಿನೇ ದಿನೇ ನಿಮ್ಮ ಬುದ್ಧಿಯು ತೀಕ್ಷ್ಣವಾಗುತ್ತಿದೆ; ನಾನು ರಾಸಬಿಹಾರಿಯ ಕುದುರೆಯ ಪ್ರಕರಣವನ್ನೇ ಕುರಿತು ಆಲೋಚಿಸುತ್ತಿದ್ದೆನು. ಒಳಿತಾಗಿ ಸಿಕ್ಕಿರಿ ನೀವು. ನಾನೀಗಲೇ ವಾತಾಪೀಪುರಕ್ಕೆ ಹೊರಡತಕ್ಕವನು. ನೀವು ನನ್ನೊಡನೆ ಬರುವಿರಷ್ಟೆ?"

"ಗುರುಗಳಿಲ್ಲಿಯೋ ಅಲ್ಲಿ ಶಿಷ್ಯನು! ನಡೆಯಿರಿ!" ಎಂದು ನಾನು ನಗುತ್ತ ಒಪ್ಪಿಕೊಂಡೆನು.

"ನಾನು ಧನ್ಯನಾದೆನು. ಈ ಪ್ರಸಂಗದಲ್ಲಿ ವೈದ್ಯರ ಅಭಿಪ್ರಾಯವು ಅವಶ್ಯವಾಗಿರುವಂತೆ ತೋರುತ್ತದೆ." ಎಂದು ನುಡಿದು ಸರಲಾಕ್ಷ ರಾಯನು ತನ್ನ ಗಡಿಯಾರವನ್ನು ತೆಗೆದು ನೋಡಿ, "ಓಹೋ! ಇಕ್ಕೋ ನೋಡಿರಿ, ಹತ್ತೂವರೆ ಗಂಟೆಯಾಗಿದೆ. ಹನ್ನೊಂದಕ್ಕೆ ಸರಿಯಾಗಿ ಹೊಗೆಬಂಡಿಯು ವಾತಾಪೀಪುರಕ್ಕೆ ಹೊರಡುವುದು. ನೀವಿನ್ನು ಮನೆಗೆ ಹೋಗುವ ವಿಚಾರಮಾಡದೆ ಹೀಗಿಂದ ಹೀಗೆಯೇ ಸ್ಟೇಶನ್ನಿಗೆ ಬರಬೇಕು. ಹೊನ್ನಪ್ಪನು ನಮ್ಮಿರ್ವರಿಗಾಗಿ ಹಾಸಿಗೆ-ಬಟ್ಟೆಗಳನ್ನು ಕಟ್ಟಿಕೊಂಡೇ ಕುಳಿತಿರಬಹುದು."

"ಆಗಲಿ!" ಎಂದು ನಾನು ಒಪ್ಪಿಕೊಂಡೆನು.

"ವಾತಾತ್ಮಜ, ಅಲ್ಲಿ ದುರ್ಬೀನು ಇದೆ; ತೆಗೆದುಕೊಳ್ಳಿರಿ. ವಾತಾಪೀಪುರದ ಬಳಿಯಲ್ಲಿರುವ ಪರ್ವತಾವಳಿಯನ್ನೂ ಇನ್ನುಳಿದ ಸೃಷ್ಟಿ ಸೌಂದರ್ಯವನ್ನೂ ಚೆನ್ನಾಗಿ ನಿರೀಕ್ಷಿಸಬೇಕಾದರೆ ದುರ್ಬೀನು ಅವಶ್ಯವಾಗಿ ಬೇಕು. ಆ ನಿಮ್ಮ ಚೀಲದಲ್ಲಿ ಹಿಂಗಾಷ್ಟಕವಿರುವದಷ್ಟೆ?" ಎಂದು ಮು ನಿನಾಸೆಯು, ಮುಗುಳ್ನಗೆ ನಕ್ಕು ಕೇಳಿದನು.

"ಅದೇಕೆ?"

"ರಾಸಬಿಹಾರಿಯಂತಹ ಅತ್ತಕಡೆಯ ಬ್ರಾಹ್ಮಣರು ಮಿಷ್ಟಾನ್ನದ ಅಡಿಗೆಯ ಹೊರತಾಗಿ ಮತ್ತೊಂದು ಅಡಿಗೆಯನ್ನೇ ಅರಿಯರು. ಸುರಸ ಭೋಜನವಿದ್ದಾಗ ನೀವು ಹೊಟ್ಟೆಯ ಅಳತೆಯನ್ನು ಮರತೇ ಬಿಡುವಿರಿ." ಎಂದು ಹುಲಿಮೀಸೆಯು ಗಹಗಹಿಸಿ ನಗುತ್ತೆ ನುಡಿದನು.

ಸಮಯವಾಗಲು, ನಾವು ರಥದಲ್ಲಿ ಕುಳಿತು ಸ್ಟೇಶನ್ನಿಗೆ ಹೋದೆವು. ಹೊಗೆಬಂಡಿಯು ಸಿದ್ಧವಾಗಿಯೇ ನಿಂತಿತ್ತು. ವಿಲಂಬಮಾಡದೆ ನಾವು ಮೊದಲನೆಯ ತರಗತಿಯ ಬಂಡಿಯಲ್ಲಿ ಯಥಾಸುಖವಾಗಿ ಕುಳಿತುಕೊಂಡು ಗಡಿಯಾರನ್ನು ತೆಗೆದು ನೋಡುವಷ್ಟರಲ್ಲಿ ಬಂಡಿಯು ಸಾಗಿಯೇ ಬಿಟ್ಟಿತು. ನಾವಿರ್ವರೂ ನಮ್ಮ ತಲೆಯಮೇಲಿನ ರುಮಾಲುಗಳನ್ನು ತೆಗೆದಿಟ್ಟು ಧೂಮ್ರಪಾನದ ಉದ್ಯೋಗವನ್ನು ನಡೆಯಿಸಿದೆವು. ಹೊಗೆಬಂಡಿಯಾದರೂ ವೇಗದಿಂದ ಹೋಗಲಾರಂಭಿಸಿತು. ಹುಲಿಮೀಸೆಯು ತನ್ನ ಕೈಯಲ್ಲಿ ಗಡಿಯಾರವನ್ನು ತೆಗೆದು ಹಿಡಿದು "ಭೇಷ್! ಬಂಡಿಯನ್ನು ಒಳ್ಳೆಯ ವೇಗದಿಂದ ಹೊಡೆಯುತ್ತಿರುವನು. ಗಂಟೆಯೊಂದಕ್ಕೆ ನಾಲ್ವತ್ತು ಮೈಲಿಗಳ ವೇಗವಾಗಿದೆ." ಎಂದು ಅವನು ಕಿಡಿಕೆಯ ಹೊರಗೆ ಮೋರೆಯನ್ನು ಹಾಕಿ, ನೋಡಿ, ನುಡಿದನು.

"ಮೈಲುಗಲ್ಲುಗಳು ನನಗೆ ಕಾಣಿಸುವುದಿಲ್ಲ. ಹೇಗೆ ಹೇಳಲಿ?" ಎಂದು ನಾನು ಉತ್ತರವನ್ನಿತ್ತೆನು.

"ನಾನಾದರೂ ಎಲ್ಲಿ ನೋಡಿದ್ದೇನೆ? ಈ ಭಾಗದಲ್ಲಿ ಮೈಲೊಂದಕ್ಕೆ ಇಪ್ಪತ್ತು ತಂತಿಯ ಕಂಬಗಳನ್ನು ನಿಲ್ಲಿಸಿರುವರಷ್ಟೆ?"

ಇಂತಹ ಸಂಗತಿಗಳೆಲ್ಲವೂ ನಿಮ್ಮ ಧ್ಯಾನದಲ್ಲಿ ನಿಂತಿರುವುದು ಹೆಚ್ಚಿನ ಮಾತು.

"ಈ ಮಾತು ಹಾಗಿರಲಿ! ಆ ಬೆಳ್ಳಿಯ ಚಿಕ್ಕೆಯೆಂಬ ಕುದುರೆಯ ಪ್ರಕರಣದಲ್ಲಿ ಆ ಅಶ್ವ ಶಿಕ್ಷಕನಾದ ಠಾಕೂರಸಿಂಗನ ಕೊಲೆಯ ಸಂಗತಿಯೂ, ಆ ಅಪೂರ್ವವಾದ ಕುದುರೆಯು ಒಮ್ಮಿಂದೊಮ್ಮೆ ಕಾಣದಂತಾಗಿರುವ ಸೋಜಿಗದ ಸಂಗತಿಯೂ, ವಿಚಾರಾರ್ಹವಾಗಿವೆ." ಎಂದು ಸರಲಾಕ್ಷನು ನುಡಿದನು.

ಆ ವೃತ್ತಾಂತವನ್ನು ನಾನು 'ವೃತ್ತವಿಪರ್ಯಾಸ,' 'ಸುದ್ದಿಯ ಸೂರಕ್ಕ' ಎಂಬ ವೃತ್ತಪತ್ರಗಳಲ್ಲಿ ಓದಿರುವೆನು. ಆದರೆ ಇನ್ನೂ ಕೆಲವು

ಪ್ರತ್ಯಕ್ಷ ಪ್ರಮಾಣಗಳು ಸಿಕ್ಕಿದ ಹೊರತು, ನಿಶ್ಚಿತವಾದ ಅಭಿಪ್ರಾಯು ವನ್ನು ಹೇಳಲಾಗದು.

"ವೈದ್ಯರೆ, ಸದ್ಯಕ್ಕೆ ಉಪಲಬ್ಧವಾದ ಪ್ರಮಾಣಗಳು ಸಾಕಾಗು ವಷ್ಟು ಇವೆಯೆಂದು ನಾನು ಭಾವಿಸುತ್ತೇನೆ. ಅವುಗಳನ್ನು ವಿಂಗಡಿಸಿ ಸುವ್ಯವಸ್ಥಿತವಾಗಿ ರಚಿಸಿ ನೋಡಿದರೆ, ನಿಜವಾಗಿ ಸಂಭವಿಸಿದ ಸಂಗತಿ ಗಳಾವುವು? ಅವುಗಳಿಂದ ನಾವು ಊಹಿಸತಕ್ಕುದೇನು? ಎಂಬುದು ಸಹಜ ವಾಗಿ ತಿಳಿಯುವಂತಿದೆ."

"ಈಗಾಗಲೆ ಠಾಕೂರಸಿಂಗನ ಮರಣದ ಕಾರ್ಯಕಾರಣದ ಸಂ ಬಂಧದ ಹೊಂದಿಕೆಯನ್ನು ನೀವು ನಿಮ್ಮ ಮನಸ್ಸಿನಲ್ಲಿ ಕಟ್ಟಿಕೊಂಡಿರು ವಿರೇನು?" ಎಂದು ನಾನು ಕುತೂಹಲದಿಂದ ಕೇಳಿದೆನು.

"ಇನ್ನೂ ನಿಶ್ಚಿತವಾಗಿ ಹೇಳಲಾರೆನು. ಕೆಲವು ಸಂಗತಿಗಳು ಸಂಧಿ ಗ್ಧವಾಗಿವೆ. ನಾವು ದೇವಿಯ ಗುಡ್ಡವೆಂಬ ಗ್ರಾಮಕ್ಕೆ ಹೋಗಿ ಚೆನ್ನಾಗಿ ಸ್ಥಳ ನಿರೀಕ್ಷಣವನ್ನು ಮಾಡಿಯೂ, ಕೆಲವು ಸಂಗತಿಗಳನ್ನು ಪ್ರತ್ಯಕ್ಷ ವಾಗಿ ರಾಸಬಿಹಾರಿಯ ಮುಖದಿಂದ ಕೇಳಿಯೂ, ನಿಶ್ಚಯಾತ್ಮಕವಾದ ಅಭಿಪ್ರಾಯವನ್ನು ಹೇಳಬಹುದು. ಒಂದು ತರ್ಕವಂತೂ ನಿಷ್ಫಲವಾದಂ ತಾಗಿದೆ."

"ಅದಾವುದು?" ಎಂದು ನಾನು ಚಕಿತನಾಗಿ ಕೇಳಿದೆನು; ಹುಲಿ ಮೀಸೆಯ ತರ್ಕವು ನಿಷ್ಫಲವಾಯಿತೆಂದರೆ 'ನೀಲಿ ಕಟ್ಟ' ಸುದ್ದಿಯೇ

"ಮೊನ್ನೆಯ ಮಂಗಳವಾರ ದಿವಸವೇ ಸುಭೇದಾರ ರಾಸಬಿಹಾ ರಿಯೂ, ಕೊತವಾಲ ಕೃಷ್ಣಭುಜಂಗನೂ ಕೂಡಿ, 'ನೀವು ನಿಲ್ಲದೆ ಬರ ಬೇಕು.' ಎಂದು ನನಗೆ ತಂತಿಯಿಂದ ತಿಳಿಸಿದ್ದರು.

ಮೊನ್ನೆ ತಂತಿ ಬಂದಿತ್ತೆ? ಇಂದು ಗುರುವಾರ! ನೀವು ಹೋಗದೆ ಎರಡು ದಿವಸ ಹಾಗೆಯೇ ಹೇಗೆ ಕುಳಿತಿರಿ?

"ಕಣ್ಣುಗೊಂಬೆಯಂತೆ ಎಲ್ಲರ ಕಣ್ಣಲ್ಲಿ ಕಟ್ಟಿರುವ ಜೇಳಿಯ ಚಿಕ್ಕೆ ಯಂತಹ ಅಶ್ವರತ್ನವನ್ನು ಒಂದೊಕ್ಸತ್ತು ಕೂಡ ಯಾರಾದರೂ ಬಚ್ಚಿ ಟ್ಟುಕೊಂಡಿರುವುದು ಅಸಂಭವವಾದ ಮಾತು. ಆದಕ್ಕಾಗಿ ಇಂದಿಲ್ಲ ನಾಳೆಗಾದರೂ, ಆ ಕುದುರೆಯ ವರ್ತಮಾನವು ಬಯಲಿಗೆ ಬರದೆ

ಇರಬೇಕೆಂದು ನಾನು ತರ್ಕಿಸಿ, ಎರಡು ದಿನ ಸುಮ್ಮನೆ ಕುಳಿತುಬಿಟ್ಟೆನು. ಇದೊಂದು ತಪ್ಪೇ ಆಯಿತು."

"ಕುದುರೆಯ ಸಮಾಚಾರವು ತಿಳಿಯದಿರುವುದರಿಂದ ನಿಮ್ಮ ವಿಚಾರ ಸರಣಿಯಲ್ಲಿ ಹೆಚ್ಚು ಕಡಿಮೆಯಾಗಿರುವುದೇನು?" ಎಂದು ನಾನು ಕೇಳಿದೆನು.

"ಅದರ ವಿಚಾರವನ್ನು ಮುಂದೆ ಮಾಡೋಣ! ಸದ್ಯಕ್ಕೆ ನೀವೊಂದು ಮಹತ್ವದ ಸಂಗತಿಯನ್ನು ಚೆನ್ನಾಗಿ ಧ್ಯಾನದಲ್ಲಿಟ್ಟುಕೊಳ್ಳಬೇಕು. ಅದೇನೆಂದರೆ— ಪ್ರತಿವರ್ಷ ವಾತಾಪಿಪುರದ ಬಯಲಿನಲ್ಲಿ ನಡೆಯುತ್ತಿರುವ ಕುದುರೆಯ ಶರ್ಯತ್ತುಗಳು (ಜೂಜುಗಳು) ಬಹುಪ್ರೇಕ್ಷಣೀಯವಾಗಿರುತ್ತವೆ. ಚಪಲಗತಿಯುಳ್ಳವೆಂದು ಹೆಸರಾದ ಕುದುರೆಗಳು ಆ ಶರ್ಯತ್ತಿಗೆ ಬರದೆ ಉಳಿಯುವುದಿಲ್ಲ. ಗೆದ್ದ ಕುದುರೆಯ ಯಜಮಾನನು ಹತ್ತು ಹನ್ನೆರಡು ಸಾವಿರ ರೂಪಾಯಿಗಳನ್ನು ಉಡಿಯಲ್ಲಿ ಕಟ್ಟಿಕೊಳ್ಳುವನು. ಇದಲ್ಲದೆ, ಹೀಗೆ ಜಿದ್ದಿನಿಂದ ಓಡುತ್ತಿರುವ ಕುದುರೆಗಳಲ್ಲಿ ಯಾವುದು ಗೆಲ್ಲುವುದು, ಯಾವುದು ಬಿಡುವುದೆಂಬ ಮಾತಿನ ಬಗ್ಗೆ ಅನೇಕ ಜನ ದುರ್ನೀತರು ಅವಾಂತರವಾದ ಜಿದ್ದುಗಳನ್ನು ಕಟ್ಟುವುದುಂಟು."

"ಹೇಗೆ? ಹೇಗೆ?" ಎಂದು ನಾನು ಪ್ರಶ್ನೆ ಮಾಡಿದೆನು.

"ಕೇಳಿರಿ! 'ಬೆಳ್ಳಿಯ ಚಿಕ್ಕೆ' ಯೆಂಬ ಕುದುರೆಯು ಮುಂದೆ ಬರುವುದೋ, 'ಗಾಳಿಯ ಮಿಂಡ' ನೆಂಬ ಬೇರೊಂದು ಕುದುರೆಯು ಮುಂದೆ ಬರುವುದೋ, ಎಂಬುದೊಂದು ಪ್ರಶ್ನೆ. 'ಗಾಳಿಯ ಮಿಂಡನು ಮುಂದೆ ಬರುವನು; ನೂರು ನೂರು ರೂಪಾಯಿ ಜಿದ್ದು!' ಎಂದು ಕೆಲವರು ಪ್ರತಿಪಾದಿಸುವರು. 'ಅದೇಕೆ? ಬೆಳ್ಳಿಯ ಚಿಕ್ಕೆಯೇ ಮುಂಡೆ ಬರುವುದು; ಇನ್ನೂರು, ಇನ್ನೂರು ರೂಪಾಯಿ ಜಿದ್ದು!' ಎಂದು ಬೇರೆ ಕೆಲವರು ಪ್ರತಿಪಾದಿಸುವರು. ಹೀಗೆ ಅವಾಂತರವಾಗಿ ಜೂಜು ಕಟ್ಟುವವರ ಹೆಸರುಗಳನ್ನೂ, ಅವರು ಕಟ್ಟಿದ ಜೂಜಿನ ಹಣದ ಪರಿಮಿತಿಯನ್ನೂ, ತಮ್ಮ ಪುಸ್ತಕಗಳಲ್ಲಿ ಬರೆದಿಟ್ಟುಕೊಳ್ಳುವವರಾದ ಪಂಚರೂ, ಅಲ್ಲಿ ಸಿದ್ಧರಾಗಿಯೇ ಇರುತ್ತಾರೆ. ಗೆದ್ದವರು ತಮಗೆ ಸಿಕ್ಕ ಹಣದಲ್ಲಿ ನೂರಕ್ಕೆ ಐದೋ, ಹತ್ತೋ, ಹೀಗೆ ಕೆಲವು ಭಾಗವನ್ನು ಪಂಚರ ಮಾನಪಾನವೆಂದು ಕೊಡುವ ಪರಿಪಾಠವೂ ಉಂಟು. ಹೀಗಾಗಿ ಬೆಳ್ಳಿಯ ಚಿಕ್ಕೆಯು

ಒಂದಾಗಬೇಕೆಂದು ಬಯಸುವವರೂ ಅನೇಕ ಜನ! ಗಾಳಿಯು ಮಿಂಡನು ಒಂದಾಗಬೇಕೆಂದು ದೇವರಿಗೆ ಬೇಡಿಕೊಳ್ಳುವವರೂ ಅನೇಕ ಜನ!

"ನಿರುದ್ಯೋಗಿಗಳಿಗೆ ಇದೊಂದು ಉದ್ಯೋಗವೇ ಆಯಿತೆಂದೆನ ಬೇಕು!" ಎಂದು ನಾನು ಅಭಿಪ್ರಾಯಪಟ್ಟು ನಕ್ಕೆನು.

"ಸರಿ! ಸರಿ! ಇಂತಹ ಸಂದಿನಲ್ಲಿ ಮುತ್ತಿನಂತಿರುವ ಆ ಬೆಳ್ಳಿಯು ಚಿಕ್ಕೆಯು ಅಕಸ್ಮಾತ್ತಾಗಿ ಕಳ್ಳರ ಪಾಲಾಗಿ ಹೋದ ವರ್ತಮಾನವನ್ನು ಕೇಳಿ ಅನೇಕ ಜನರ ಚಿತ್ತಗಳು ಸಂಕ್ಷುಬ್ಧವಾಗಿ ಹೋಗಿವೆ. ನಾಮಾಂಕಿತವಾದ ಕುದುರೆಯದು; ಅದರ ಯಜಮಾನನು ಬಹುಜನಕ್ಕೆ ಬೇಕಾದವನಾದ ಶ್ರೀಮಂತನು. ಶರ್ಯತ್ತುಗಳನ್ನು ನೋಡುವ ಕುತೂಹಲವುಳ್ಳ ಜನರ ಎಣಿಕೆಯಿಲ್ಲ. ಆದುದರಿಂದ ಬೆಳ್ಳಿಯ ಚಿಕ್ಕೆಯು ಇಲ್ಲದಾದ ಸಂಗತಿಯನ್ನರಿತು ಅನೇಕರು ಅನೇಕವಾದ ತರ್ಕಗಳನ್ನು ಕಟ್ಟುವರು. ದ್ವೇಷವನ್ನು ಸಾಧಿಸಿಕೊಳ್ಳುವವರು ಇದೇ ಸಮಯವೆಂದರಿತು ಕೆಲ ಜನರು ತಮಗೆ ಬೇಡವಾದ ಜನರ ಮೇಲೆ ಇಲ್ಲದ ಆರೋಪಗಳನ್ನು ಹೊರಿಸಲು ಹಿಂದೆ ಮುಂದೆ ನೋಡಿಲ್ಲ. ವರ್ತಮಾನ ಪತ್ರಕಾರರಾದರೂ ತಮ್ಮ ಪತ್ರಗಳಲ್ಲಿ ಹೊಸ ಸುದ್ದಿಯನ್ನು ಕೊಟ್ಟು ಖ್ಯಾತಿಯನ್ನು ಕಟ್ಟಿಕೊಳ್ಳುವ ಅಭಿಲಾಷೆಗಾಗಿ ಅಡಗೊಲಜ್ಜಿಯ ಮನೆಯಲ್ಲಿ ಹುಟ್ಟಿದ ಸುದ್ದಿಗಳನ್ನೆತ್ತಿಕೊಂಡು, ಅವುಗಳಿಗೆ ಉಪ್ಪುಕಾರವನ್ನು ತಗುಲಿಸಿ, ಸತ್ಯದ ವಿಪರ್ಯಾಸವನ್ನು ಮಾಡಿಬಿಡುವರು. ತಿಳಿಗೇಡಿಯಾದ ಸ್ನೇಹಿತನೊಬ್ಬನು—'ಸಾಧು! ಸಂಪಾದಕರೆ, ನಿಮ್ಮ ಲೇಖವು ಅಪ್ರತಿಮವಾಗಿದೆ.' ಎಂದು ಎಡಿಟರನಿಗೆ ಪತ್ರವನ್ನು ಬರೆದಿದ್ದರೆ, ಆ ಎಡಿಟರನು ಆ ಪತ್ರವನ್ನು ಕಂಡಕಂಡವರಿಗೆ ಅಕ್ಕರತೆಯಿಂದ ತೋರಿಸಿ, ಜನರಿಂದ ಧನ್ಯವಾದವನ್ನು ಪಡೆಯುವನು. ಆದಕಾರಣ 'ವೃತ್ತವಿಪರ್ಯಾಸ', 'ಸುದ್ದಿಯ ಸೂಕ್ಷ್ಮ' ಮುಂತಾದ ವರ್ತಮಾನ ಪತ್ರಗಳಲ್ಲಿಯ ಲೇಖಗಳಿಗೆ ಮಹತ್ತ್ವವನ್ನು ಕೊಡಲಾಗದು." ಎಂದು ಹೇಳಿ ಹುಲಿಮಾಸೆಯು ಹೊಗೆಸೊಪ್ಪಿನ ಚುಟ್ಟಿಗಳನ್ನು ತೆಗೆದು ತಾನೊಂದನ್ನು ಸೇದಿ, ನನಗೊಂದು ಕೊಟ್ಟನು.

ಧೂಮ್ರಪಾನವು ಯಥೇಚ್ಛವಾಗಿ ಸಾಗಿದ ಬಳಿಕ "ನಿಮಗೆ ತಿಳಿದಿರುವ ಸಮಾಚಾರವು ಏಂತಿರುವುದು?" ಎಂದು ನಾನು ನನ್ನ ಮಿತ್ರನನ್ನು ಕೇಳಿದೆನು.

"ಕೇಳಿರಿ! ಸೋಮವಾರದ ಸಾಯಂಕಾಲದಲ್ಲಿ ಠಾಕೂರಸಿಂಗನು ಆ ಕುದುರೆಯನ್ನು ಹೊರಗೆ ತಿರುಗಾಡಿಸಿಕೊಂಡು ಬಂದನು. ಬಳಿಕ ಅದರ ವೈತಿಕ್ಕುವುದೂ, ಅದಕ್ಕೆ ದಾಣೆ-ಮೇವುಗಳನ್ನಿಡುವುದೂ, ಆಯಿತು. ಪ್ರಹರರಾತ್ರಿಯಾದ ಬಳಿಕ ಠಾಕೂರಸಿಂಗನು ಕಾವಲುಗಾರರಲ್ಲಿ ಇಬ್ಬರನ್ನು ತನ್ನ ಮನೆಗೆ ಊಟಕ್ಕೆ ಕರೆದುಕೊಂಡು ನಡೆದನು. ಕುದುರೆಯ ಲಾಯದ ಮನೆಯಿಂದ ಠಾಕೂರಸಿಂಗನ ಮನೆಯು ಒಂದು ಕೂಗಳತೆಯು ದೂರದಲ್ಲಿತ್ತು. ಇವರು ಹೋದ ಬಳಿಕ ಲಾಯದ ಮನೆಯಲ್ಲಿ ಉಳಿದವನಾದ ಗಂಗಾದೀನನೆಂಬ ಮೂರನೆಯ ಕಾವಲುಗಾರನು ಮನೆಯ ಬಾಗಿಲವನ್ನು ಭದ್ರವಾಗಿ ಇಕ್ಕಿ ಬೀಗವನ್ನು ಜಡಿದನು ಬೆಳ್ಳಿಯ ಚಿಕ್ಕೆಯು ಅಲ್ಲಿಯ ವರೆಗೆ ತನ್ನ ಗೋದಲೆಯಲ್ಲಿ ಸುರಕ್ಷಿತವಾಗಿಯೇ ಇತ್ತು. ಠಾಕೂರಸಿಂಗನ ಭೋಜನವಾದ ಬಳಿಕ ಗಂಗಾದೀನನ ತಂಗಿ 'ಮಥುರಾ' ಎಂಬ ಹದಿನಾರು-ಹದಿನೇಳು ವರುಷದ ಹುಡುಗಿಯು, ಕೈಯಲ್ಲಿ ದೀಪವನ್ನು ಹಿಡಿದುಕೊಂಡು, ತನ್ನ ಅಣ್ಣನಿಗಾಗಿ ಬುತ್ತಿಯನ್ನು ತೆಗೆದುಕೊಂಡು ನಡೆದಿದ್ದಳು. ಮಥುರೆಯು ಲಾಯದ ಸಮೀಪಕ್ಕೆ ಬರುವಷ್ಟರಲ್ಲಿ ಯಾವನೋ ಒಬ್ಬ ಮನುಷ್ಯನು 'ಹುಡುಗಿಯೆ, ತುಸು ತಡೆ.' ಎಂದು ಕೂಗಿ ಅವಳನ್ನು ನಿಲ್ಲಿಸಿದನು. ಅವನ ಚಲ್ಲಣ, ಉದ್ದಂಗಿ, ಮುಂಡಾಸ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೆಯ ಮನೆತನದವನಾಗಿ ತೋರಿದನು. ಅವನ ವಯಸ್ಸು ಸುಮಾರು ಮೂವತ್ತು ಆದೀತು."

"ತಂಗೀ, ಈ ಹಾದಿಯು ಎಲ್ಲಿಗೆ ಹೋಗುವುದೆಂಬುದನ್ನು ನೀನು ಹೇಳಬಲ್ಲಿಯಾ? ನಾನೊಂದು ಕಡೆಗೆ ಹೊರಟವನು ಹಾದಿಯನ್ನರಿಯದೆ ಹುಚ್ಚನ ಹಾಗೆ ತಿರುಗಾಡುತ್ತಿರುವೆನು." ಎಂದು ಆ ಹೊಸಬನು ಕೇಳಿದನು.

"ಇದು ಸುಭೇದಾರ ರಾಸಬಿಹಾರಿಯವರ ಕುದುರೆಯ ಲಾಯಕ್ಕೆ ಹೋಗುವ ಹಾದಿಯು."

"ದೈವವೇ ಕೂಡಿಸಿಕೊಟ್ಟಂತಾಯಿತಲ್ಲ! ನನಗೆ ಅಲ್ಲಿಯೂ ಒಂದು ಕೆಲಸವುಂಟು; ಆ ಲಾಯವನ್ನು ಕಾಯುವುದಕ್ಕೆ ಅಲ್ಲಿ ಬೆಳತನಕ ಒಬ್ಬ ಹುಡುಗನು ಮಲಗಿರುವನಂತೆ. ನೀನು ಅವನಿಗಾಗಿ ಬುತ್ತಿಯನ್ನು ತೆಗೆದುಕೊಂಡು ನಡೆದಿರುವೆಯೆನು?"

"ಅಹುದು, ಅವನು ನನ್ನ ಅಣ್ಣನಾದ ಗಂಗಾದೀನನು. ಅವನಿಗಾಗಿ ನಾನು ಈ ಬುತ್ತಿಯನ್ನು ಒಯ್ಯುತ್ತಿರುವೆನು."

"ಹಾಗಾದರೆ ನೀನೊಂದು ಕೆಲಸ ಮಾಡುವಿಯಾ? ಈ ಕಾಗದವನ್ನು ನೀನು ನಿಮ್ಮ ಅಣ್ಣನಿಗೆ ತಲ್ಪಿಸಿದರೆ ನಾಳೆಯ ಮುಂಜಾವದಲ್ಲಿ ನಾನು ನಿನಗೊಂದು ರೇಸಿಮೆಯ ಅಂಚಿನ ಹೂವಿನ ಸೀರೆಯನ್ನು ಕಾಣಿಕೆಯಾಗಿ ಕೊಡುವೆನು. ಬೇಕಾದರೆ ಹತ್ತು ರೂಪಾಯಿಗಳನ್ನು ಈಗಲೇ ತೆಗೆದುಕೊಳ್ಳು." ಎಂದು ಆ ಮೋಸಗಾರನು ನುಡಿದು, ತನ್ನ ಜೇಬಿನೊಳಗಿಂದ ಕಾಗದದ ಚೀಟಿಯನ್ನು ತೆಗೆಯಲಾರಂಭಿಸಿದನು. ಆ ಕಾಗದದ ಬಿಳಿಯ ತುದಿಯನ್ನು ತಾನು ಪ್ರತ್ಯಕ್ಷವಾಗಿ ನೋಡಿದಳೆಂದು ಮಥುರೆಯು ಪ್ರಮಾಣಮಾಡಿ ಹೇಳಿದ್ದಾಳೆ.

"ಆತನ ನಡೆನುಡಿಗಳನ್ನು ನೋಡಿ ಮಥುರೆಯು ಬೆದರಿ ಲಾಯದ ಕಡೆಗೆ ಓಡುತ್ತ ಹೋಗಿ ಆವಾರದ ಗೋಡೆಯ ಹೊರಗೆ ನಿಂತು ಕಿಡಿಕೆಯಲ್ಲಿಂದ ಬುತ್ತಿಯ ಗಂಟನ್ನು ಒಳಗೆ ಚಾಚಿದಳು; ಕಿಡಿಕೆಯಲ್ಲಿಯೇ ನಿಂತು ಬುತ್ತಿ ಬರುವ ಹಾದಿಯನ್ನು ನೋಡುತ್ತಿರುವವನಾದ ಗಂಗಾದೀನನು ಆ ಗಂಟನ್ನು ಸಂಗಡಲೇ ಒಳಕ್ಕೆ ಸೆಳೆದುಕೊಂಡನು. ಮಥುರೆಯು ಆ ಹೊಸಬನ ಸುದ್ದಿಯನ್ನು ಅಣ್ಣನಿಗೆ ಹೇಳಲುಪಕ್ರಮಿಸುವಷ್ಟರಲ್ಲಿಯೆ, ಅವನಾದರೂ ಅಲ್ಲಿಗೆ ಬಂದು ಬಿಟ್ಟನು."

"ಸಲಾಮ್! ಗಂಗಾದೀನ ನಿನ್ನೊಡನೆ ಕೆಲವು ಮಾತುಗಳನ್ನಾಡಬೇಕೆಂದು ನಾನು ಬಂದಿದ್ದೇನೆ" ಎಂದು ಆ ಹೊಸಬನು ಕೇಳಿದನು.

"ನನ್ನೊಡನೆ ಯಾವ ಮಾತು ಸಾಹೇಬರೇ?" ಎಂದು ಗಂಗಾದೀನನು ತಿರಸ್ಕಾರದಿಂದ ಕೇಳಿದನು.

"ನಿನಗೆ ಹಿತವಾದ ಮಾತು! ಕೈಯಲ್ಲಿ ಹಾಕಿಕೊಳ್ಳಲು ಬೆಳ್ಳಿಯ ಕಡಗ-ಸರಪಣಿಗಳು ಸಿಕ್ಕರೆ ಹಿತದ ಮಾತಾಗಲಿಕ್ಕಿಲ್ಲವೆ? ನಿಮ್ಮಲ್ಲಿ 'ಬೆಳ್ಳಿಯ ಚಿಕ್ಕೆ' ಯೆಂಬೂ 'ಕಡಿದ ಬಂಟ' ನೆಂದೂ ಎರಡು ಕುದುರೆಗಳಿವೆಯಷ್ಟೆ? ಬೆಳ್ಳಿಯ ಚಿಕ್ಕೆಯ ತಡಿಯನ್ನು ಕಡಿದ ಬಂಟನಿಗೂ, ಕಡಿದ ಬಂಟನ ತಡಿಯನ್ನು ಬೆಳ್ಳಿಯ ಚಿಕ್ಕೆಗೂ ಹಾಕಿದರೆ ಒಂದು ಕೂಗಳತೆ ಓಡುವಷ್ಟರಲ್ಲಿ ಬೆಳ್ಳಿಯ ಚಿಕ್ಕೆಯು ಹಿಂದಾಗುವದೆಂದು ಹೇಳುತ್ತಾರೆ. ಇದು ಸರಿಯೆ?"

"ಇದೆಲ್ಲವೂ ನಿಮಗೇತಕೆ ಬೇಕು? ಸುಮ್ಮನೆ ಹಾದಿಯ ಹಿಡಿಯಿರಿ?" ಎಂದು ಗಂಗಾದೀನನು ಸಿಟ್ಟುಮಾಡಿದನು.

"ಹಾಗಲ್ಲ! ಈ ರಹಸ್ಯವನ್ನರಿತವರು ಬೆಳ್ಳಿಯ ಚಿಕ್ಕೆಯು ಹಿಂದುಳಿಯುವುದೆಂದು ಜಿದ್ದು ಕಟ್ಟಿರುವರೆಂತೆ. ಈ ರಹಸ್ಯವು ನಿಜವಾದುದೋ?"

"ಓ! ತಾವು ಜೂಜುಗಾರರ ಒಳಸಂಚಿನವರೊ? ದಯೆಮಾಡಿರಿ! ಸಲಾಮ್. ನೀವೀಗಲೇ ಇಲ್ಲಿಂದ ಕಾಲು ತೆಗೆಯದಿದ್ದರೆ ನಾಯಿಯನ್ನು ಬಿಚ್ಚುವೆನು. ಹೊಟ್ಟೆಯ ಹರಿಸಿಕೊಂಡು ಸತ್ತೀರಿ. ಎದ್ದೇಳಿರಿ!" ಎಂದು ನುಡಿದವನೆ ಗಂಗಾದೀನನು ಲಾಯದ ಬಾಗಿಲನ್ನು ಕಡಕ್ಕನೆ ತೆರೆದು ನಾಯಿಯನ್ನು ಬಿಟ್ಟನು. ಅಷ್ಟರಲ್ಲಿ ಆ ಹೊಸಬನು ಜಾರಿಕೊಂಡು ಪಾರಾದನು. ಗಂಗಾದೀನನು ಅವನನ್ನು ಅತ್ತಿತ್ತ ಹುಡುಕಿದನು."

ಸರಲಾಕ್ಷನು ಇಷ್ಟು ಸಂಗತಿಯನ್ನು ಹೇಳಿದ ಕೂಡಲೆ ನಾನು (ಪಂಡಿತ ವಾತಾತ್ಮಜ) ಅವನನ್ನು ತಡೆದು—"ನಿಲ್ಲಿರಿ; ನಾನೊಂದು ಮಾತನ್ನು ಕೇಳುತ್ತೇನೆ! ಗಂಗಾದೀನನು ಆ ಹೊಸಬನನ್ನು ಹುಡುಕುತ್ತಿರುವಾಗ ಲಾಯದ ಬಾಗಿಲನ್ನು ತೆರೆದಿಟ್ಟಿದ್ದನೋ? ಜೋಕೆಯಿಂದ ಮುಚ್ಚಿಕೊಂಡಿದ್ದನೋ?"

"ಸಾಧು! ಪಂಡಿತರೆ, ಒಳ್ಳೆಯ ಚಾಣಾಕ್ಷರಂತೆ ಪ್ರಶ್ನವ ಮಾಡಿಡಿರಿ. ನಿನ್ನೆಯ ಈ ವಿಚಾರವು ನನಗೆ ತೋಚಿದುದರಿಂದ, ನಾನು ತಂತಿಯ ಮುಖಾಂತರವಾಗಿ ಈ ಪ್ರಶ್ನದ ಉತ್ತರವನು ತರಿಸಿಕೊಂಡಿದ್ದೇನೆ. ಗಂಗಾದೀನನು ಬಾಗಿಲನ್ನು ಮುಚ್ಚಿ ಹೊರಬೀಗವನ್ನು ಹಾಕಿಯೆ ಆ ಹೊಸಬನ ಶೋಧಕ್ಕಾಗಿ ತಿರುಗಾಡಿದನೆಂತೆ! ಕಿಡಿಕೆಯಲ್ಲಂತೂ ಮನುಷ್ಯನು ಹಿಡಿಸುವ ಹಾಗಿಲ್ಲ!"

"ಸಾಗಲಿ, ಹಾಗಾದರೆ, ನಿಮ್ಮ ಸಮಾಚಾರ!" ಎಂದು ಹೇಳಿ ನಾನು ಮತ್ತೊಂದು ಬತ್ತಿಯನ್ನು ಹೊತ್ತಿಸಿದೆನು.

ಉಳಿದ ಕಾವಲುಗಾರರು ಉಂಡುಬಂದ ಬಳಿಕ ಗಂಗಾದೀನನು ನಡೆದ ವರ್ತಮಾನವನ್ನು ಅವರೊಡನೆ ಠಾಕೂರಸಿಂಗನಿಗೆ ಹೇಳಿ ಕಳುಹಿದನು; ಅದನ್ನು ಕೇಳಿ ಠಾಕೂರಸಿಂಗನಿಗೆ ಪರಮಾವಧಿಯ ಸಂತಾಪವಾಯಿತು. ಮನೆಯಲ್ಲಿಯೇ ಕುಳಿತು ಅವನು ಬಾಯಿಗೆ ಬಂದಹಾಗೆ ಒದರಾಡಿದನು. ಠಾಕೂರಸಿಂಗನ ವಿಲಾಸಿನಿಯಾದ ಸತಿಯು ಮೋಹಕ

ವಾದ ವಿಲಾಸಚೇಷ್ಟಿತಗಳಿಂದಲೂ, ಸಮಾಧಾನದ ಸವಿನುಡಿಗಳಿಂದಲೂ, ಗಂಡನ ಮನಸ್ಸನ್ನು ವಿನೋದಕ್ಕೆಳೆಯಬೇಕೆಂದು ಪರಿಪರಿಯಾಗಿ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಕುವರಬಾಯಿಯು ಗಂಡನ ಗೊಡವೆಯನ್ನು ಬಿಟ್ಟು ತನ್ನ ಪೇಟಿಯನ್ನು ಬಾರಿಸಿ, ಮೆಲ್ಲನೆ ಹಾಡಲಾರಂಭಿಸಿದಳು. ಇತ್ತ ಠಾಕೂರಸಿಂಗನು ವೀರಗಚ್ಚೆಯ ದೋತರವನ್ನುಟ್ಟು ಬೇಟೆಗಾರನ ವೇಷವನ್ನು ಧರಿಸಿ ಮೇಲೆ ದೊಡ್ಡದೊಂದು ನಿಲುವಂಗಿಯನ್ನು ಮೈತುಂಬ ಹೊದ್ದುಕೊಂಡು, ರಾತ್ರಿಯು ಮೂರನೆಯ ಯಾಮಾರ್ಧವು ಕಳೆದ ಬಳಿಕ ಮನೆಯ ಹೊರಗೆ ಹೋದುದನ್ನು ಕುವರಬಾಯಿಯು ತಾನು ಪ್ರತ್ಯಕ್ಷವಾಗಿ ಕಂಡಿರುವುದಾಗಿ ಹೇಳುತ್ತಾಳೆ. ಆಗ ಹೋದ ಠಾಕೂರಸಿಂಗನು ಮರಳಿ ಮನೆಗೆ ಬರಲೇ ಇಲ್ಲ. "ಬೆಳಗಾದರೂ ಗಂಡನು ಬರಲಿಲ್ಲವೆಂಬುದನ್ನು ಕಂಡು ಕುವರಬಾಯಿಯು ಚಿಂತಾಕ್ರಾಂತಳಾಗಿ ಮಥುರೆಯನ್ನು ಸಂಗಡ ಕರೆದುಕೊಂಡು ಲಗುಬಗೆಯಿಂದ ಕುದುರೆಯ ಲಾಯಕ್ಕೆ ಬಂದಳು. ಲಾಯದ ಬಾಗಿಲವು ಹಾರದೆರೆದಿತ್ತು. ಒಳಬದಿಯ ಪಡಸಾಲೆಯಲ್ಲಿ ಗಂಗಾದೀನನು ಮದ್ದುತಿಂದವನ ಹಾಗೆ ಪ್ರಜ್ಞೆಯಿಲ್ಲದೆ ಬಿದ್ದುಕೊಂಡಿದ್ದನು. ಕಟ್ಟಿದ್ದ ಸ್ಥಳದಲ್ಲಿ ಬೆಳ್ಳಿಯ ಚಿಕ್ಕೆಯೂ ಇದ್ದಿಲ್ಲ. ಅಶ್ವರಕ್ಷಕನಾದ ಠಾಕೂರಸಿಂಗನ ವಾರ್ತೆಯೂ ಇಲ್ಲ! ಎಚ್ಚರದಿಂದ ಕಾಯುವ ಸರತಿಯಿಲ್ಲದವರಾದ ಬೇರೆಯವರಿಬ್ಬರು ಆಳುಗಳು ಕಡಲೆಯ ಗಳಿಗೆಗಳ ಸಂದಿಯಲ್ಲಿ ಸ್ವಸ್ಥವಾಗಿ ಮಲಗಿಕೊಂಡು ನಿದ್ದೆ ಮಾಡುತ್ತಿದ್ದರು. ಅವರನ್ನು ಎಚ್ಚರಿಸಿ ಕೇಳಲಾಗಿ ಅವರು ತಮಗೆ ಏನೂ ಗೊತ್ತಿಲ್ಲವೆಂದು ಹೇಳಿದರು. ಹಿರಿನಿದ್ದೆಯವರವರು! ಗಂಗಾದೀನನನ್ನು ಬಡಿದೆಬ್ಬಿಸಿ ನೋಡಿದರು! ಸುತ್ತಿ-ಸುತ್ತಿ-ಕೊಂಡು ಬೀಳುತ್ತಿದ್ದನಲ್ಲದೆ, ಜನರು ತನ್ನನ್ನು ಮಾತಾಡಿಸುತ್ತಿರುವರೆಂಬ ಪ್ರಜ್ಞೆಯೇ ಅವನಿಗಿರಲಿಲ್ಲ. ಅವನ ಹಾದಿಯನ್ನು ಬಿಟ್ಟು ಉಳಿದವರೆಲ್ಲರೂ ಆ ಅಶ್ವಪಾಲಕರ ಶೋಧಕ್ಕಾಗಿ ಕಂಡಕಂಡ ಕಡೆಗೆ ಹರಿದಾಡಲಾರಂಭಿಸಿದರು.

"ಲಾಯದಿಂದ ಸುಮಾರು ಎರಡು ಕಯ್ಗಲ್ಲುಗಳ ಅಂತರದಲ್ಲಿ ಒಂದು ಆಳವಾದ ಕೊನ್ನಾರವಿತ್ತು (ದೊಡ್ಡದೊಂದು ತಗ್ಗು). ಆ ಕೊನ್ನಾರದ ದಡದ ಮೇಲಿರುವ ಹುಲಿಗಿಲುಗಿಡಕ್ಕೆ ಒಂದು ಡಗಲೆಯು ಜೋತಾಡುತ್ತಿರುವುದನ್ನು ಒಬ್ಬನು ಕಂಡನು. ಅದು ಠಾಕೂರಸಿಂಗನ ಡಗಲೆಯೇ ಎಂದು ಗೊತ್ತುಹಿಡಿದು, ಆ ಮನುಷ್ಯನು ಅಲ್ಲಿಯೆ ನಿಂತು ಸುತ್ತಲೂ

ನಿರೀಕ್ಷಿಸಿ ನೋಡಲಾಗಿ, ಒಂದು ಹೆಣವು ಕಂಡಿತು. ಪಾಪ! ಅದು ಠಾಕೂರಸಿಂಗನದೇ. ಬಲವಾದ ಟೊಣಪೆಯ ಹೊಡೆತದಿಂದ ಠಾಕೂರನ ತಲೆಯು ಒಡೆದು ಚಿಪ್ಪಾಡೆಯಾಗಿತ್ತು; ಚೂರಿಯ ಹೊಡೆತದಿಂದ ಅವನ ತೊಡೆಗಾದರೂ ಒಂದು ಗಾಯವಾಗಿತ್ತು. ಠಾಕೂರಸಿಂಗನಾದರೂ ತನ್ನನ್ನು ಕೊಲ್ಲಬಂದವನನ್ನು ತನ್ನ ಕೈಯಲ್ಲಿರುವ ತೀಕ್ಷ್ಣವಾದ ಶಸ್ತ್ರ ದಿಂದ ಇರಿದಿದ್ದನಾಗಿ ತೋರಿತು; ಏಕೆಂದರೆ, ಅವನ ಕೈಯಲ್ಲಿಯ ಮೊನೆಯಾದ ಶಸ್ತ್ರದ ತುದಿಗೆ ರಕ್ತವು ಮೆತ್ತಿಕೊಂಡು ಕರಣಿಗಟ್ಟಿತ್ತು. ಠಾಕೂರನು ತನ್ನ ಎಡಗೈಯಲ್ಲಿ ರೇಸಿಮೆಯ ಗದ್ದೇಮಡಿಯ ಹೆಗಲ ವಸ್ತ್ರವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದನು; ಆ ವಸ್ತ್ರವನ್ನು ಕಂಡಾ ಕ್ಷಣವೇ ಮಥುರೆಯು ಚಕಿತಳಾಗಿ, 'ಅಯ್ಯೋ! ಈ ವಸ್ತ್ರವನ್ನು ನಾನು ನಿನ್ನೆಯ ರಾತ್ರಿಯಲ್ಲಿ ಆ ಸಾಹೇಬನ ಹೆಗಲಮೇಲೆ ಕಂಡಿದ್ದೆನು; ಅವನೇ ಈ ಘೋರವಾದ ಕೃತ್ಯವನ್ನು ಮಾಡಿರಬಹುದು; ಏಕೆಂದರೆ, ಅವನ ಕೈಯಲ್ಲಿ ಒನಕೆಯಂತಹ ದೊಣ್ಣೆಯೂ ಇತ್ತು.' ಎಂದು ಪ್ರಮಾಣ ಮಾಡಿ ಹೇಳಿದಳು."

"ಈ ವಸ್ತ್ರವೇ ಆ ಸಾಹೇಬನ ಹೆಗಲಮೇಲಿತ್ತೆಂದು ಗಂಗಾದೀನ ನಾದರೂ ನಿಶ್ಚಿತವಾಗಿ ಹೇಳಿದನು. ಅವನೇ ತನ್ನ ಬುತ್ತಿಯಲ್ಲಿ ಮದ್ದು ಕಲಿಸಿರಬಹುದೆಂತಲೂ ಗಂಗಾದೀನನ ನಂಬುಗೆಯು."

"ಠಾಕೂರಸಿಂಗನ ಕೊಲೆಯಾದ ಸಮಯದಲ್ಲಿ ಕುದುರೆಯು ಅವನ ಬಳಿಯಲ್ಲಿಯೇ ನಿಂತಿತ್ತೆಂದು ಅಲ್ಲಿ ಮೂಡಿರುವ ಹೆಜ್ಜೆಗಳಿಂದ ನಿರ್ವಿ ವಾದವಾಗಿ ಊಹಿಸಬಹುದು. ಆ ಕುದುರೆಯನ್ನು ಅಪಹರಿಸಿದವನ ಬೆನ್ನಟ್ಟಿ ಹೋಗಿ ಠಾಕೂರಸಿಂಗನು ಪ್ರಾಣವನ್ನು ಕಳೆದುಕೊಂಡನೆಂದು ಕೊತವಾಲ ಕೃಷ್ಣಭುಜಂಗನ ತರ್ಕವಾಗಿದೆ. ಅವರು ಆ ಸಂದೇಹದ ಮೇಲಿಂದಲೇ ಪಪ್ಪಳಿಯ ವಸ್ತ್ರದವನಾದ ಮುಹಮ್ಮದ ಇಬ್ರಾಹೀಮನೆಂಬ ಲಬ್ಬೇರವನನ್ನು ಹಿಡಿದು ಕೂಡಿಸಿದ್ದಾರೆ. ಇಷ್ಟು ಸಂಗತಿಗಳೆಲ್ಲ ಸಾಕ್ಷಿ ಗಳಿಂದ ಸಿದ್ಧವಾಗಿವೆ."

"ತನ್ನ ಮೇಲಿನ ಆರೋಪವನ್ನು ನಿವಾರಿಸಿಕೊಳ್ಳಲು ಮುಹಮ್ಮದ ಇಬ್ರಾಹೀಮನು ಸಯುಕ್ತಿಕವಾದ ಸಮಾಧಾನಗಳನ್ನು ಹೇಳಿರುವನೇ?" ಎಂದು ನಾನು ಕೇಳಿದೆನು.

"ಮುಹಮ್ಮದ ಇಬ್ರಾಹೀಮನು ದೊಡ್ಡ ಮನೆತನದವನೂ, ಸುಶಿಕ್ಷಿತನೂ, ಆದ ಗೃಹಸ್ಥನು. ಇವನು ಕುದುರೆಗಳ ಜೂಜುಗಳಲ್ಲಿ ತನ್ನ ಹಣವೆಲ್ಲವನ್ನೂ ಹಾಳುಮಾಡಿಕೊಂಡು, ಈಚೆಗೆ ಜೂಜುಗಾರರ ಪಂಚನಾಗಿ ವ್ಯವಹರಿಸಿ, ಹಾಗೂ ಹೀಗೂ ಹೊಟ್ಟೆಯು ತುಂಬಿಕೊಳ್ಳುತ್ತಾನೆ. ಬೆಳ್ಳಿಯ ಚಿಕ್ಕೆಯು ಸೋಲುವುದೆಂದು ಪ್ರತಿಪಾದಿಸುವ ಜೂಜುಗಾರರು ಒಟ್ಟಿನಲ್ಲಿ ಐವತ್ತು ಸಾವಿರ ರೂಪಾಯಿಗಳ ಜೂಜು ಕಟ್ಟಿರುವುದಾಗಿ ಮುಹಮ್ಮದ ಇಬ್ರಾಹೀಮನ ಪುಸ್ತಕದ ಮೇಲಿಂದ ಕಂಡು ಬರುತ್ತದೆ."

"ಕೊತವಾಲರ ವಶವಾದ ಬಳಿಕ ಮುಹಮ್ಮದ ಇಬ್ರಾಹೀಮನು ತಾನು ಮಥುರೆಯನ್ನು ದಾರಿಯಲ್ಲಿ ಕಂಡುದುದನ್ನೂ, ಗಂಗಾದೀನನೊಡನೆ, ಮಾತಾಡಲೆಂದು ಹೋದುದನ್ನೂ, ಒಪ್ಪಿಕೊಂಡಿರುವನಲ್ಲದೆ, ಠಾಕೂರನ ಹೆಣದ ಕೈಯಲ್ಲಿದ್ದ ವಸ್ತ್ರವು ತನ್ನದೆಂದೂ ಅದು ತನ್ನ ಹೆಗಲ ಮೇಲಿಂದ ಜಾರಿಬಿದ್ದು ಠಾಕೂರನ ಕೈಗೆ ಸಿಕ್ಕಿರಬಹುದೆಂವೂ ಸೂಚಿಸಿರುವನು."

"ಠಾಕೂರನ ಕೈಯಲ್ಲಿಯ ಶಸ್ತ್ರಕ್ಕೆ ರಕ್ತವು ಅಂಟಿಕೊಂಡಿದೆ; ಆದುದರಿಂದ ಆತತಾಯಿಯಾದ ಮುಹಮ್ಮದ ಇಬ್ರಾಹೀಮನನ್ನು ಅವನು ಶಸ್ತ್ರದಿಂದ ಇರಿದಿರಬಹುದೆಂಬ ತರ್ಕವಾಗಿದೆ; ಆದರೆ, ಗಾಯವು ಮುಹಮ್ಮದ ಇಬ್ರಾಹೀಮನ ಮೈಮೇಲೆ ಇದ್ದಂತೆ ತೋರುವುದಿಲ್ಲ; ಹೀಗಿರಲು, ಆ ಮುಸಲ್ಮಾನನ ಮೇಲೆ ಆರೋಪವು ಸ್ಥಾಪಿತವಾಗಲರಿಯುದಷ್ಟೆ?" ಎಂದು ನಾನು ಕೇಳಿದೆನು.

"ಸಯುಕ್ತಿಕವಾದ ಪ್ರಶ್ನವಿದು; ವಾತಾತ್ಮಜರೆ! ಆದರೆ ಠಾಕೂರನು ತನ್ನ ಕೈಚೂರಿಯಿಂದ ಪ್ರತಿಪಕ್ಷಿಯನ್ನು ಇರಿದಿರಲೇಬೇಕೆಂದು ಗ್ರಹಿಸಲು ಯಾರು ಹೇಳಿರುವರು?"

"ಸರಿ, ಜ್ಞಾಪಕವಾಯಿತು! ಠಾಕೂರನ ತೊಡೆಗೂ ಒಂದು ಘಾಯವಾಗಿದೆ. ಗುದ್ದಾಟದ ಭರದಲ್ಲಿ ಠಾಕೂರನ ಶಸ್ತ್ರವೇ ಅವನ ತೊಡೆಗೆ ತಗುಲಿ ಘಾಯವಾದರೂ ಆಗಿರಬಹುದು. ಹೀಗೆ ತರ್ಕವಾಡಿದರೆ ಮುಹಮ್ಮದ ಇಬ್ರಾಹೀಮನು ತನ್ನ ಮೇಲಿನ ಆರೋಪದ ನಿವಾರಣಾರ್ಥವಾಗಿ ಮಾಡಿರುವ ವಾದದಲ್ಲಿ ಒಂದು ಮಹತ್ವದ ವಾದವು ನಿರರ್ಥಕವಾಯಿತು." ಎಂದು ನಾನು ಅಭಿಪ್ರಾಯಪಟ್ಟೆನು.

"ಹೇಗೆ ತರ್ಕಮಾಡಿದರೂ ಅದಕ್ಕೆ ಸಾಧಕ ಬಾಧಕಗಳುಂಟು; ಠಾಕೂರನ ತೊಡೆಗಾದ ಘಾಯವು ಅವನ ಕೈಯಲ್ಲಿರುವ ಶಸ್ತ್ರದಿಂದಲೇ ಆಗಿರಬಹುದೆಂಬ ಮಾತಿನ ವಿಚಾರವನ್ನು, ಶವವನ್ನು ಪರೀಕ್ಷಿಸಿದ ಡಾಕ್ಟರನಾಗಲಿ, ಕೊತವಾಲನಾಗಲಿ, ಮಾಡಿರುವುದಾಗಿ ತೋರುವುದಿಲ್ಲ. ಇನ್ನು ಅಲ್ಲಿಗೆ ಹೋಗಿ ನಾವು ಹೆಚ್ಚಾಗಿ ಶೋಧಮಾಡಿ ನೋಡಲಾಗಿ ಏನೆಂಬುದು ತಾನೇ ತೋರುವುದು."

ಪ್ರಹರದ ಹೊತ್ತಿರುವಾಗಲೇ ನಾವು ವಾತಾಪೀಪುರದ ಸ್ಟೇಶನ್ನಿಗೆ ಬಂದೆವು. ಅಲ್ಲಿ ನಮ್ಮ ಸ್ವಾಗತಕ್ಕಾಗಿ ಇಬ್ಬರು ಗೃಹಸ್ಥರು ಬಂದಿದ್ದರು. ಒಬ್ಬನು ಆಜಾನುಬಾಹುವಾದ ಆಳು; ಅವನ ಕಲ್ಲಿಯ ಮೀಸೆಗಳೆಂದರೆ ಎಂಡು ಗಂಗಾವನಗಳೇ ಆಗಿದ್ದುವು; ಸಶಕ್ತನೂ, ತೇಜಸ್ವಿಯೂ, ದರ್ಪಶಾಲಿಯೂ ಆಗಿರುವ ಆ ಭವ್ಯಪುರುಷನ ಮುಖಮುದ್ರೆಯು ಉಗ್ರವಾಗಿ ಕಾಣುತ್ತಿತ್ತು. ಇನ್ನೊಬ್ಬನು ದೃಢಾಂಗನೂ ಎತ್ತರವಾದ ಆಕಾರವುಳ್ಳವನೂ ಆಗಿದ್ದರೂ, ಮೊದಲಿನವನ ಮುಂದೆ ಅವನು ಕುರಿಮರಿಯಂತೆ ಕಂಡನು. ಮೊದಲಿನವನೇ ಸುಭೇದಾರ ರಾಸಬಿಹಾರಿಯು. ಮತ್ತೊಬ್ಬನು ಕೊತವಾಲ ಕೃಷ್ಣಭುಜಂಗನು.

"ರಾಮ ರಾಮ! ಸರಲಾಕ್ಷರಾಯರೆ, ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ಇಕೋ, ಈ ನನ್ನ ಜೊತೆಗಾರರೇ ಕೃಷ್ಣಭುಜಂಗ ಕೊತವಾಲರು. ಇವರೊಳ್ಳೆಯ ಸಾಹಸದಿಂದ ನಮ್ಮ ಕುದುರೆಯ ಪ್ರಕರಣದ ಶೋಧವನ್ನು ನಡೆಯಿಸಿದ್ದಾರೆ. ನೀವೂ ದಯೆಮಾಡಿ ಬಂದಿರಿ. ಹೇಗಾದರೂ ಮಾಡಿ ನಮ್ಮ ಠಾಕೂರಸಿಂಗನನ್ನು ಕೊಂದವನ ಪಾರಿಪತ್ಯವಾಗುವಂತೆಯೂ, ಬಂಗಾರದಂತಿರುವ ನನ್ನ ಕುದುರೆಯ ಶೋಧವಾಗುವಂತೆಯೂ, ಮಾಡಿರಿ." ಎಂದು ಸುಭೇದಾರನು ಹೇಳಿದನು.

ಹುಲಿಮೀಸೆಯು ಕೃಷ್ಣಭುಜಂಗನಿಗೆ ಪ್ರಣಾಮಮಾಡಿ "ಹೊಸವಾದ ಶೋಧಗಳೇನಾದರೂ ಆಗಿವೆಯೋ?" ಎಂದು ಕೇಳಿದನು.

"ಹೇಳಿಕೊಳ್ಳುವ ಹೊಸ ಸಂಗತಿಗಳೇನೂ ಹೊರಬಿದ್ದಿಲ್ಲ. ಮೊದಲು ಊರಿಗಂತೂ ಹೋಗೋಣ! ಕಣ್ಣು ಬೆಳಕಿರುವಾಗಲೇ ಈ ಪ್ರಾಂತದಲ್ಲಿಯ ಕೆಲವು ರಮಣೀಯವಾದ ಪ್ರದೇಶಗಳನ್ನು ಹೋಗು ಹೋಗುವಾಗ ನೋಡಿಕೊಳ್ಳುವಿರೆಂತೆ." ಎಂದು ಕೃಷ್ಣಭುಜಂಗನು ಸೂಚಿಸಿದನು.

ಮೇಲ್ಕಟ್ಟಿಲ್ಲದ ಬಂಡಿಯಲ್ಲಿ ನಾವು ನಾಲ್ವರೂ ಕುಳಿತು ನಡೆದೆವು. ಅಲ್ಲಿಯ ವಿಸ್ತಾರವಾದ ಬೀದಿಯು ಎರಡು ಬದಿಗಳಲ್ಲಿಯೂ ಬೇವು, ಹೆಬ್ಬೇವು, ಆಲ, ನೇರಿಲ, ಮಾವು ಮುಂತಾದ ದೊಡ್ಡ ದೊಡ್ಡ ಮರಗಳ ಸಾಲುಗಳು ಅಡ್ಡವಾಗಿ ಬೆಳೆದು ಬೀದಿಯ ಮೇಲೆ ದಟ್ಟವಾದ ನೆಳಲನ್ನು ಕೆಡಹಿದ್ದುವು ಆ ಬೀದಿಯ ಎಡಬದಿಗೆ ಗಗನಚುಂಬಿತವಾದ ಕೋಟೆಯ ಗೋಡೆಯಂತೆ ಪರ್ವತಾವಲಿಯು ಅವಿಚ್ಛಿನ್ನವಾಗಿ ಕಾಣುತ್ತಿತ್ತು. ಬಲಗಡೆಗೆ ಸಮತಲವಾದ ಕೆಂಪುಭೂಮಿಯು ಮಾವು, ತೆಂಗು, ಈಚಲ ಮುಂತಾದ ಗಿಡಗಳಿಂದ ಬಹು ರಮಣೀಯವಾಗಿ ತೋರುತ್ತಿತ್ತು. ಆಗ ವಸಂತಮಾಸವಿದ್ದುದರಿಂದ, ಸಂದಟಿತವಾದ ಮಂಜರಿಗಳಿಂದ ಮಾವು ರಗಳ ಎಲೆಗಳೆಲ್ಲ ಮುಚ್ಚಿಹೋಗಿದ್ದುವು. ಹಸಿರು ಮುರಿಯುವ ಬೇವಿನ ಕೊಂಬೆಗಳಲ್ಲಿ ಸೂಕ್ಷ್ಮವಾಗಿಯೂ ಶುಭ್ರವಾಗಿಯೂ ತೋರುವ ಹೂಗೊಂಚಲುಗಳು ಬಹು ಪ್ರೇಕ್ಷಣೀಯವಾಗಿದ್ದುವು. ಬಲಕ್ಕೆ ಆಮ್ರವೃಕ್ಷಗಳಲ್ಲಿ ಕುಳಿತು ಕೂಜಿತವನ್ನು ಮಾಡುವ ಕೋಗಿಲೆಗಳ ಪಂಚಮರಾಗವೂ, ಎಡಕ್ಕೆ ಪರ್ವತಾಗ್ರಗಳಲ್ಲಿ ನಿಂತು ನರ್ತಿಸಿರುವ ಮಯೂರಗಳ ಕೇಕೆಯೂ ಬಹು ಚಿತ್ತರಂಜಕವಾಗಿದ್ದುವು.

"ಕಣ್ಣು ಕಿವಿಗಳೆರಡಕ್ಕೂ ಸಮವಾಗಿ ತೃಪ್ತಿಯುಂಟಾಗಿದೆ." ಎಂದು ನಾನು ಉದ್ಗಾರ ತೆಗೆದೆನು.

"ಮೂಗಿಗಾದರೂ ಅನಾದರವೆಲ್ಲಿ? ಕವಿಗಳು ಆಮ್ರ, ಬಕುಲ, ಚಂಪಕ, ಮಾಲತಿಗಳ ಸುಗಂಧದ ವರ್ಣನೆಯನ್ನು ಮಾಡಲಿ. ಈ ಬೇವಿನ ಹೂಗಳ ಸುವಾಸವು ನಿಶ್ಚಯವಾಗಿ ಆಹ್ಲಾದಕರವಾಗಿದೆ. ಕಾಳಿದಾಸನಿದ್ದ ಪ್ರಾಂತದಲ್ಲಿ ಈ ಗಿಡಗಳು ಬೆಳೆಯುತಿರಲಿಲ್ಲವಾಗಿ ತೋರುತ್ತದೆ. ಹಾಗಾಗಿದ್ದರೆ, ಋತುಸಂಹಾರದ ತುಂಬ ಈ ನಿಂಬ ಮಂಜರಿಗಳ ಸುಗಂಧವೇ ಇಡುಗುತ್ತಿತ್ತು!" ಎಂದು ಸರಲಾಕ್ಷರಾಯನು ಬಣ್ಣಿಸಿ ನುಡಿದನು.

ಹೀಗೆ ಉತ್ಸುಕತೆಯಿಂದ ವನಶೋಭೆಯನ್ನು ನಿರೀಕ್ಷಿಸುತ್ತಲೂ, ಅಲ್ಲಲ್ಲಿ ಎರಳೆ, ಹುಲ್ಲೆ, ನರಿ, ಮುಂಗಲಿಗಳ ಓಡಾಟಗಳನ್ನು ನೋಡುತ್ತಲೂ, ಎರಡು ಗಳಿಗೆ ನಾವು ಪ್ರವಾಸದಲ್ಲಿ ಕಳೆದೆವು. ಅಷ್ಟರಲ್ಲಿ ಹಾದಿಯು ದಕ್ಷಿಣದಿಂದ ಪೂರ್ವಕ್ಕೆ ಒಡೆಯಿತು. ಅಕೋ! ಅಂಬಾರಿಗಳನ್ನು ಹೊತ್ತುಕೊಂಡಿರುವ ಎರಡು ಮದ್ದಾನೆಗಳು ಇದಿರುಬದಿರಾಗಿ

ನಿಂತು ಕಾವಲುದ್ಯುಕ್ತವಾಗಿವೆಯೋ ಎಂಬಂತೆ ಇಕ್ಕಟ್ಟಾಗಿ ನಿಂತಿರುವ ಎರಡು ಪರ್ವತಗಳ ಮೇಲೆ ಕಟ್ಟಿರುವ ಎರಡು ಕೋಟೆಗಳು ಶೋಭಿಸಿ ತೋರಿಸುವು. ಆ ಪರ್ವತಗಳ ಮಧ್ಯದಲ್ಲಿರುವ ಪ್ರದೇಶದಲ್ಲಿ ವಾತಾಪೀ ಪುರವನ್ನು ಕಟ್ಟಿದ್ದಾರೆ. ಪುರಾಣ ಪ್ರಸಿದ್ಧವೂ ಇತಿಹಾಸ ಪ್ರಸಿದ್ಧವೂ ಆಗಿರುವ ಸ್ಥಾನವದು. ಪುರಾಣದಲ್ಲಿಯ 'ವಾತಾಪೀ' ಎಂಬ ರಾಕ್ಷಸನು ತನ್ನ ನಿವಾಸವನ್ನು ಈ ಸ್ಥಾನದಲ್ಲಿ ಮಾಡಿಕೊಂಡಿದ್ದನೆಂದು ಇದಕ್ಕೆ ವಾತಾಪೀಪುರವೆಂಬ ಹೆಸರು. ಇಲ್ಲಿಯೇ ಜಗದ್ವಿಖ್ಯಾತನಾದ ಪುಲಿಕೇಶಿ-ಸಾರ್ವಭೌಮನು ತನ್ನ ರಾಜಧಾನಿಯನ್ನು ಮಾಡಿಕೊಂಡಿದ್ದನು.

ಸುಭೇದಾರ ರಾಸಬಿಹಾರಿಯ ಮನೆಯು ವಾತಾಪೀಪುರದಲ್ಲಿದ್ದಿಲ್ಲ. ಪರ್ವತವನ್ನು ಎಡಕ್ಕೆ ಸುತ್ತಿ ಕೆಲವು ಹಾದಿಯನ್ನು ನಡೆದ ಮೇಲೆ ನಾವು ನದೀತೀರದಲ್ಲಿರುವ ದೇವಿಯಗುಡ್ಡವೆಂಬ ಗ್ರಾಮಕ್ಕೆ ಬಂದೆವು. ಗ್ರಾಮದ ಸಮೀಪದಲ್ಲಿರುವ ಉನ್ನತವಾದ ಕಲ್ಲುಬಂಡೆಗಳ ಮೇಲಿಂದ ಆ ನದಿಯ ಪ್ರವಾಹವು ತಡಸಲವಾಗಿ ಧಬಧಬಿಸಿ ಬೀಳುತ್ತಿತ್ತು. ಆ ತಡಸಲಿನ ಎದುರಿನಲ್ಲಿಯೆ ರಮ್ಯವಾಗಿ ರಚಿಸಿರುವ ಉದ್ಯಾನದ ಮಧ್ಯ ದಲ್ಲಿ ಸುಭೇದಾರನ ಮಂದಿರವಿತ್ತು. ಉದ್ಯಾನದ ಶೋಭೆಯನ್ನು ನೋಡ ಲಾಗಿ ಸುಭೇದಾರನು ರಸಿಕನಾಗಿರಬಹುದೆಂದು ಕಂಡಿತು. ಮನೆಯ ಲ್ಲಿಯ ಸುವ್ಯವಸ್ಥೆಯನ್ನು ರಾಸಬಿಹಾರಿಯ ಭಾರ್ಯೆಯು ಜಾಣಳಾದ ಗೃಹಿಣಿಯಾಗಿರಬೇಕೆಂದು ಹುಲಿಮಿಾಸೆಯು ತರ್ಕಿಸಿದನು.

ಉಪಾಹಾರವಾದ ಬಳಿಕ ಮತ್ತೆ ಈ ಪ್ರಕರಣದ ವಿಷಯವಾಗಿ ಮಾತುಗಳು ನಡೆದುವು.

"ಸುಭೇದಾರ, ಠಾಕೂರಸಿಂಗನು ನಿಮ್ಮಲ್ಲಿ ಏಳೆಂಟು ವರುಷ ಇದ್ದನೆಂದು ಕೇಳಿದ್ದೆನು. ಅವನು ನಂಬುಗೆಯವನಾದ ಸೇವಕನಾಗಿ ದ್ದನೊ?" ಎಂದು ಹುಲಿಮಿಾಸೆ ಸರಲಾಕ್ಷನು ಕೇಳಿದನು.

"ಒಳ್ಳೆಯ ಮನುಷ್ಯ, ಕಂಡಿರಾ?" ಎಂದು ರಾಸಬಿಹಾರಿಯು ವ್ಯಸನಾರ್ತನಾಗಿ ಉದ್ಗಾರ ತೆಗೆದನು.

"ಕೃಷ್ಣಭುಜಂಗರೆ, ಠಾಕೂರಸಿಂಗನ ಹೆಣದ ಮೇಲಿರುವ ವಸ್ತ್ರ ಗಳ ಟಿಪ್ಪಣಿಯು ನಿಮ್ಮಲ್ಲಿರುವುದೊ?" ಎಂದು ಸರಲಾಕ್ಷನು ಕೇಳಿದನು.

"ಟಿಪ್ಪಣಿಯೊಂದೇ ಏಕೆ? ಆ ವಸ್ತುಗಳನ್ನು ಚೆನ್ನಾಗಿ ಇಟ್ಟಿದ್ದೇನೆ. ಅವುಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಇಲ್ಲಿಯೆ ಹೊರಗಣ ಕೋಣೆಯಲ್ಲಿ ಟ್ಟಿದ್ದೇನೆ. ಬೇಕಾದರೆ ತೋರಿಸುತ್ತೇನೆ; ಬನ್ನಿರಿ."

ನಾವೆಲ್ಲರೂ ಆ ಕೋಣೆಗೆ ಹೋದೆವು. ಕೃಷ್ಣಭುಜಂಗನು ಆ ಪೆಟ್ಟಿಗೆಯೊಳಗಿನ ವಸ್ತುಗಳನ್ನು ಒಂದು ಚಾಪೆಯ ಮೇಲೆ ಸುರಿದು ಟಿಪ್ಪಣಿಯನ್ನು ಓದಲಾರಂಭಿಸಿದನು:—

"ಮೇಣದ ಕಡ್ಡಿಗಳುಳ್ಳ ದೀಪದ ಪೆಟ್ಟಿಗೆಯೊಂದು; ಮೇಣಬತ್ತಿಯ ಚೂರು ಒಂದು, ಎರಡು ಅಂಗುಲ ಉದ್ದ; ಹೊಗೆಸೊಪ್ಪು ಸೇದುವ ಬೆಳ್ಳಿಯ ಚಿಲಿಮೆಯೊಂದು; ಹೊಗೆಸೊಪ್ಪು ಹಾಕುವ ಸುರಿಕೆಯ ಚೀಲ, ಎರಡು ತೊಲೆ ಹೊಗೆಸೊಪ್ಪು ಸಹಿತ; ಬೆಳ್ಳಿಯ ಗಡಿಯಾರ, ಅದಕ್ಕೆ ಚಿನ್ನದ ಸರಪಣಿ, ತೂಕ ಒಂದು ತೊಲೆ; ಇಪ್ಪತ್ತು ರೂಪಾಯಿಯ ನೋಟು ಒಂದು; ಸೀಸಕಡ್ಡಿ ಒಂದು, ಮೂರು ಅಂಗುಲ ಉದ್ದವಾದುದು; ಹಸ್ತಿದಂತದ ಹಿಡಿಕೆಯ ಚಾಕುವಿನಂತಹ ಶಸ್ತ್ರ ಒಂದು (ಮಡಿಚಲಿಕ್ಕೆ ಬರುವುದಿಲ್ಲ.) ರಾಜರ್ಸ ಎಂಬ ಶಸ್ತ್ರಕಾರನ ಹೆಸರುಳ್ಳದು. ಐದು ಕಾಗದಗಳು."

"ಹೊಸ ಮಾದರಿಯ ಚಾಕುವಿದು. ಇದೇ ಠಾಕೂರಸಿಂಗನ ಹೆಣದ ಕೈಯಲ್ಲಿ ಇತ್ತಷ್ಟೆ? ಇದರಿಂದ ವೈದ್ಯರು ಸೂಕ್ಷ್ಮವಾದ ಶಸ್ತ್ರಕ್ರಿಯೆಯನ್ನು ಮಾಡಬಹುದಲ್ಲವೆ? ಪಂಡಿತ ವಾತಾತ್ಮಜ." ಎಂದು ಸರಲಾಕ್ಷನು ಆ ಚಾಕುವನ್ನು ಎತ್ತಿ ತೋರಿಸಿ ನನ್ನನ್ನು ಕೇಳಿದನು.

"ಅಹುದು. ನೇತ್ರರೋಗದಲ್ಲಿ ಉಪಯೋಗಿಸುವ ಶಸ್ತ್ರವಿದು." ಎಂದು ನಾನು ಹೇಳಿದೆನು.

"ಸೂಕ್ಷ್ಮವಾದ ಶಸ್ತ್ರಕ್ರಿಯೆಗಳಿಗಾಗಿ ಮಾಡಿದ ಸೂಕ್ಷ್ಮತರವಾದ ಶಸ್ತ್ರವಿದು; ಕಳ್ಳರನ್ನು ಬೆನ್ನಟ್ಟಿ ಹೋದವನಾದ ಠಾಕೂರಸಿಂಗನು ಇಂತಹ ಶಸ್ತ್ರವನ್ನೇಕೆ ತೆಗೆದುಕೊಂಡುಹೋದನೋ ಕಾಣೆನು. ಇದನ್ನು ಮಡಿಚಲಿಕ್ಕಾಗದು; ಇಂತಹದನ್ನು ಜೇಬಿನಲ್ಲಿಟ್ಟುಕೊಂಡು ಹೋಗುವವನಿಗೆ ಅಪಾಯವಾಗದಿರದು." ಎಂದು ಹುಲಿವಿಲಾಸೆಯು ಅಭಿಪ್ರಾಯಪಟ್ಟನು.

"ಅಲಗು ಫಕ್ಕನೆ ನೆಟ್ಟೀತೆಂದು ಇದರ ತುದಿಗೆ ಒಂದು ತೊಗಲಿನ ಟೊಪ್ಪಿಗೆಯನ್ನು ಮಾಡಿದ್ದಾರೆ. ಆ ಚಿಕ್ಕ ಟೊಪ್ಪಿಗೆಯು ಗುದ್ದಾಟವಾದಲ್ಲಿ ಬಿದ್ದಿತ್ತು. ಇಕೋ ನೋಡಿರಿ." ಎಂದು ಕೃಷ್ಣಭುಜಂಗನು ನುಡಿದು ಟೊಪ್ಪಿಗೆಯನ್ನು ತೋರಿಸಿದನು.

ಅವನಾಡಿದ ಮಾತುಗಳನ್ನು ಕೇಳಿ ಹುಲಿವಿಾಸೆಯು ಊರ್ಧ್ವ ದೃಷ್ಟಿಯಾಗಿ ಧ್ಯಾನಿಸುತ್ತ ಕುಳಿತನು.

ಈ ಶಸ್ತ್ರವು ಠಾಕೂರಸಿಂಗನ ಮೇಜಿನ ಮೇಲೆ ನಾಲ್ಕಾರು ದಿವಸ ಗಳಿಂದ ಬಿದ್ದಿತ್ತೆಂದು ಅವನ ಹೆಂಡತಿಯಾದ ಕುವರಬಾಯಿಯು ಹೇಳು ತ್ತಾಳೆ. ಆ ದಿವಸ ಠಾಕೂರಸಿಂಗನು ಅಂತಹ ಅವಸರದಲ್ಲಿ ಆ ಚಾಕುವು ಸಂಗಡ ಇದ್ದರೂ ಇರಲೆಂದು ಒಯ್ದಿರಬಹುದು." ಎಂದು ಕೃಷ್ಣ ಭುಜಂಗನು ಸೂಚಿಸಿದನು.

"ನಿಮ್ಮ ಮಾತು ಸೋಪಪತ್ತಿಕವಾಗಿ ತೋರುತ್ತದೆ; ಇನ್ನು ಈ ಕಾಗದಗಳನ್ನು ತೆರೆಯಿರಿ; ನೋಡೋಣ!"

ಕೃಷ್ಣಭುಜಂಗನು ಆ ಕಾಗದಗಳನ್ನು ಒಂದೊಂದಾಗಿ ತೆಗೆದು ಸರ ಲಾಕ್ಷನಿಗೆ ಕೊಟ್ಟನು.

ಸರಲಾಕ್ಷನು ಅವುಗಳನ್ನು ನೋಡುವಾಗಃ— "ಇವು ಮೂರು, ಹುಲ್ಲು-ಕಡಲೆಗಳ ಲೆಕ್ಕದ ಚೀಟಿಗಳು; ಇದು ಕುವರಬಾಯಿಗೆ 'ಪಿಯಾನೋ' ಬಾರಿಸಲಿಕ್ಕೆ ಕಲಿಸಿದವನಾದ 'ಚಂದೂ ಅಡ್ಡಗುಮ್ಮಣ್ಣ ನವರ' ಎಂಬವನು ಬರೆದ ಕ್ಷೇಮಸಮಾಚಾರದ ಪತ್ರವು. ಇದೇನು? ಮಗನೀರಾಮ ಚಂದೂಭಾಯಿ ಎಂಬ ಜವಳಿಯ ವ್ಯಾಪಾರಸ್ಥನ ಲೆಖ್ಖದ ಪಟ್ಟಿಯು—ಕುವರಬಾಯಿಗಾಗಿ ಗಿಳಿಯುಬಣ್ಣದ ಜರದ ಪತ್ತಲ ಒಂದು, ಬೆಲೆ ಎಪ್ಪತ್ತೈದು ರೂಪಾಯಿ; ಹಸ್ತೆ ಬಾಳೂ ಸಂಗಮ. ಇಷ್ಟು ಬೆಲೆಯ ಸೀರೆ! ಹೋಗಲಿ! ಅವರವರ ಗೃಹ ಕೃತ್ಯದ ಕೆಲಸವಿದು. ಈ ಕಾಗದಗಳಲ್ಲಿ ವಿಶೇಷವೇನೂ ಇಲ್ಲವೆಂತಾಯಿತು." ಎಂದು ಹೇಳಿ ಸರಲಾಕ್ಷನು ಕೋಣೆಯಿಂದೆದ್ದು ಹೊರಗೆ ನಡೆದನು. ನಾವೆಲ್ಲರೂ ಅವ ನನ್ನು ಹಿಂಬಾಲಿಸಿ ನಡೆದೆವು.

ಅಷ್ಟರಲ್ಲಿ ರೂಪವತಿಯೂ ವಿಲಾಸಪ್ರಿಯಳೂ ಆದ ತರುಣಿಯೋ ರ್ವಳು ಚಿಂತಾಕ್ರಾಂತ ಮುಖದಿಂದ ನಾವಿದ್ದಲ್ಲಿಗೆ ಬಂದು "ಏನು ಕೊತ ವಾಲರೆ, ಏನಾದರೂ ಶೋಧವಾಯಿತೆ? ಪರದೇಶಿಯಾದ ನಾನು ಇನ್ನೆಷ್ಟು ದಿವಸ ಇಲ್ಲಿರಲಿ ಹೇಳಿರಿ." ಎಂದು ಚಿಂತೆಯಲ್ಲಿಯೇ ಕಿಂಚಿನ್ಮಂದಹಾಸಕ್ಕೆ ಅವಕಾಶವನ್ನು ಕೊಟ್ಟು ಕೇಳಿದಳು.

“ಆದೀತು! ಬೇಗನೆ ಶೋಧವಾದೀತು. ಕುವರಬಾಯಿ, ನಿಮಗೆ ನಾಳೆ ಅಪ್ಪಣೆಯಾಗುವದು.” ಎಂದು ಕೃಷ್ಣಭುಜಂಗನು ಹೇಳಿ, ಬಳಿಕ ಸರಲಾಕ್ಷನನ್ನು ಕುರಿತು, “ರಾಯರೆ, ಇವರೇ ಠಾಕೂರಸಿಂಗನ ದುರ್ದೈವಿಗಳಾದ ಪತ್ನಿಯವರು.” ಎಂದು ಹೇಳಿಕೊಟ್ಟನು.

ಸರಲಾಕ್ಷನು ಕುವರಬಾಯಿಯ ಮುಖವನ್ನು ದಿಟ್ಟಿಸಿ ನೋಡಿ “ಓ! ಕುವರಬಾಯಿ, ನೀವು ಆಜೆಯ ವರ್ಷದ ಶ್ರಾವಣಮಾಸದಲ್ಲಿ ಲೀಲಾಧರ ಖುಶಾಲಚಂದರೊಡನೆ ಬೆಳಗಾವಿಯಲ್ಲಿ ಪ್ರಮೀಲಾ-ಸ್ವಯಂವರ-ನಾಟಕವನ್ನು ನೋಡಬಂದಿರಲಿಲ್ಲವೆ? ಆಗ ನೀವು ಗಿಳಿಯ ಬಣ್ಣದ ಜರದ ಪತ್ತಲವನ್ನುಟ್ಟುಕೊಂಡಿದ್ದಿರಿ!” ಎಂದು ಕೇಳಿದನು.

“ಯಾರನ್ನು ನೋಡಿದಿರಿ ನೀವು? ನಾನು ಪ್ರಮೀಲಾ-ಸ್ವಯಂವರವೆಂಬ ನಾಟಕವನ್ನೇ ನೋಡಿಲ್ಲ. ಗಿಳಿಯ ಬಣ್ಣದ ಸೀರೆಯನ್ನು ನಾನು ಮೊನ್ನೆಯೆ ಕೊಂಡಿದ್ದೇನೆ.” ಎಂದು ಕುವರಬಾಯಿಯು ಕಿಂಚಿತ್ ಕ್ರುದ್ಧಳಾಗಿ ನುಡಿದಳು.

“ಗಿಳಿಯಬಣ್ಣದ ಸೀರೆಯನ್ನು ನೀವು ಮೊನ್ನೆಯೆ ಕೊಂಡಿರೆಂಬುದನ್ನು ಮಗನೀರಾಮನ ಲೆಕ್ಕವೇ ಹೇಳುತ್ತಿದೆ. ಅಂತಹ ಮತ್ತೊಂದು ಸೀರೆಯನ್ನು ಆಜೆಯ ವರ್ಷದಲ್ಲಿ ಕೊಳ್ಳಲಿಕ್ಕೆ ನಿಮಗೆ ಬೇಡೆಂಬುವವರಾರಿದ್ದರು? ಹೋಗಲಿ! ನೀವು ಪ್ರಮೀಲಾನಾಟಕಕ್ಕೆ ಹೋಗಲೇ ಇಲ್ಲವೆಂದು ಹೇಳಿದ ಬಳಿಕ ವಾದವೇ ಇಲ್ಲ. ಒಬ್ಬರಂತೆ ಒಬ್ಬರಿರುವುದನ್ನು ಒಮ್ಮೊಮ್ಮೆ ಕಾಣಬಹುದು. ಕ್ಷಮಿಸಿರಿ. ನಾನು ತಪ್ಪಿದೆನು.”

“ತಪ್ಪೇತರದು, ರಾಯರೆ? ಬ್ರಾಹ್ಮಣರಾದವರಿಗೂ ಒಮ್ಮೊಮ್ಮೆ ‘ಹುಲಿಮೀಸೆ’ ಎಂಬ ಹೆಸರು” ಎಂದು ಕುವರಬಾಯಿಯು ಹೊಟ್ಟೆಯೊಳಗಿನ ಸಿಟ್ಟಿನಿಂದ ನುಡಿದಳು.

ಹುಲಿಮೀಸೆಯು ಅವಳ ಮಾತಿಗೆ ನಕ್ಕು “ಕುವರಬಾಯಿ, ನೀವು ವಿನೋದವತಿಯರು! ಹುಲಿಮೀಸೆಯೆಂಬುದು ನನ್ನ ಹೆಸರಲ್ಲ. ನನ್ನ ಮುತ್ತಾತರಿಗೆ ಆ ಹೆಸರನ್ನು ಇಟ್ಟಿದ್ದರು. ಆ ಹೆಸರಿನ ಚಮತ್ಕಾರಕ್ಕಾಗಿ ಜನರು ನಮ್ಮ ಮನೆಯವರನ್ನೇ ಆ ಹೆಸರಿನಿಂದ ಕರೆಯಲಾರಂಭಿಸಿದ್ದರಿಂದ, ಹುಲಿಮೀಸೆಯೆಂಬುದು ನಮ್ಮ ಅಡ್ಡಹೆಸರೇ ಆಗಿ ಹೋಗಿದೆ.” ಎಂದು ಹೇಳಿದನು.

"ಬ್ರಾಹ್ಮಣರಲ್ಲಿ ಹುಲಿಮೀಸೆಯೆಂಬ ಹೆಸರನ್ನು ಎಲ್ಲಿಯೂ ನಾನು ಕೇಳಿಲ್ಲ. ಅಂತಹ ಹೆಸರನ್ನು ನಿಮ್ಮ ಮುತ್ತಾತರಿಗೆ ಹೇಗಿಟ್ಟರು?" ಎಂದು ರಾಸಬಿಹಾರಿಯು ಜಡೆಯುಂತಿರುವ ತನ್ನ ಕಲ್ಲಿಯ ಮೀಸೆಯ ಮೇಲೆ ಕೈಯ್ಯಾಡಿಸಿ ಕೇಳಿದನು.

"ಇಂತಹ ಸಮಯದಲ್ಲಿ ಆ ಕಥಾಂತರವನ್ನೇ ಹೇಳಲಿಯಾ? ಆಗಲಿ, ಕೇಳಿರಿ! ವೇಣೀಸಂಹಾರ-ನಾಟಕವನ್ನು ಬರೆದ ಭಟ್ಟನಾರಾಯಣನ ವಂಶದವರು ನಾವು. ಆ ಕವಿಗೆ 'ಮೃಗರಾಜ ಲಕ್ಷ್ಮ' ಎಂಬ ಬಿರುದು. ಮೃಗರಾಜಲಕ್ಷ್ಮವೆಂದರೆ ಸಿಂಹದ ಜಡೆ. ಇನ್ನು ಕನ್ನಡದ ಪಂಡಿತರು ಒಮ್ಮೊಮ್ಮೆ ಸಿಂಹಕ್ಕೆ ಹುಲಿಯೆಂದು ಕರೆಯುವುದುಂಟು; ಸಿಂಹಕೇಶಿಯಾದ ಚಾಲುಕ್ಯ ಸಾರ್ವಭೌಮನಿಗೆ 'ಪುಲಿಕೇಶಿ' ಎಂದರು; ಹಾಗೆಯೇ ನಮ್ಮ ಮುತ್ತಾತನ ಹೆಸರು ಪುಲಿಕೇಶಿ. ಹುಲಿಕೇಶಿ ಶಬ್ದವು ಹುಲಿಮೀಸೆಯಾಯಿತು." ಎಂದು ಸರಲಾಕ್ಷನು ತನ್ನ ಹೆಸರಿನ ಉತ್ಪತ್ತಿಯನ್ನು ವಿವರಿಸಿ ಹೇಳಿದನು.

ಮರುದಿವಸದ ಬೆಳಗಿನಲ್ಲಿ ನಾವು ಠಾಕೂರಿನ ಕೊಲೆಯಾದ ಸ್ಥಳವನ್ನು ನೋಡಲಿಕ್ಕೆ ಹೊರಟೆವು. ಮಾರ್ಗದಲ್ಲಿ ಸುಭೇದಾರರ ಮಾವಿನ ತೋಟದ ಬಳಿಯಲ್ಲಿದ್ದ ಕುದುರೆಯ ಲಾಯದ ಮನೆಯನ್ನು ನೋಡಿದೆವು. ಆ ಅಶ್ವಶಾಲೆಯ ಹೊರಗೋಡೆಗಳನ್ನು ನೋಡಲಾಗಿ, ಅದೊಂದು ಚಿಕ್ಕದಾದ ಕೋಟೆಯೋ ಎಂಬಂತೆ ಕಂಡಿತು. ಒಳಗಿನ ಎರಡು ಕೊಟ್ಟಿಗೆಗಳಲ್ಲಿ ಐದೈದು ಕುದುರೆಗಳನ್ನು ದೂರದೂರವಾಗಿ ಕಟ್ಟಿದ್ದರು. ಕಸದ ಕಡ್ಡಿಯಾಗಲಿ, ಲದ್ದಿಯ ಚೂರಾಗಲಿ, ಅಲ್ಲಿ ಇದ್ದಿಲ್ಲ; ಎತ್ತ ನೋಡಿದತ್ತ ಸ್ವಚ್ಛತೆಯೇ ಸ್ವಚ್ಛತೆಯು. ಕೊಟ್ಟಿಗೆಯಲ್ಲಿ ವಿಪುಲವಾಗಿ ಗಾಳಿಯಾಡುತ್ತಿತ್ತು, ಬೆಳಕಿಗೂ ಕೊರತೆಯಿರಲಿಲ್ಲ; ಒಂದೊಂದು ಕುದುರೆಗೆ ಎಷ್ಟು ಹುಲ್ಲನ್ನು ತೂಗಿ ಹಾಕಿತು? ತಿನ್ನದೆ ಉಳಿಯಿತೆಷ್ಟು? ಮುಂತಾದ ಸಂಗತಿಗಳ ಲೆಕ್ಕವನ್ನು ಆಯಾ ಕುದುರೆಯ ಬಳಿಯಲ್ಲಿಯ ಹಲಗೆಯ ಮೇಲೆ ಕಾಲಕಾಲಕ್ಕೆ ಆಳುಗಳು ಬರೆದಿಟ್ಟಿದ್ದರು; ಬೆಳ್ಳಿಯ ಚಿಕ್ಕೆಯನ್ನು ಕಟ್ಟಿರುವ ಸ್ಥಳವು ಬೇರೆಯಾಗಿಯೂ, ಅಲ್ಲಿಯ ವ್ಯವಸ್ಥೆಯೂ ವಿಶೇಷವಾಗಿಯೂ ಇರುವಂತೆ ಕಂಡಿತು. ಬೆಳಗಾಗುವ ತನಕ ಎಚ್ಚರಿಕೆಯಿಂದ ಕಾದುಕೊಂಡು ಕುಳ್ಳಿರುವ ಆಳಿನ ಸಮೀಪದಲ್ಲಿಯೇ ಎರಡು ಭೀಕರವಾದ ಸೊಣಗಗಳನ್ನು ಕಟ್ಟಿದ್ದರು. ಅಲ್ಲಿಯ ಸಂಗತಿಗಳನ್ನು ಸೂಕ್ಷ್ಮವಾಗಿ ನಿರೀ

ಕ್ಷಿಸಿ ಹುಲಿವಿಶಾಸೆಯು ವುುಗುಳ್ಳಗೆ ನಕ್ಕು ಕೊಲೆಯಾದ ಸ್ಥಳಕ್ಕೆ ನಮ್ಮನ್ನು ಕರೆದುಕೊಂಡು ನಡೆದನು.

ಆಳವಾದ ಹಾಳು ಕೆರೆಯಂತೆ ಕಾಣುವ ಒಂದು ವಿಸ್ತಾರವಾದ ತಗ್ಗಿಗೆ ನಾವು ಬಂದೆವು. ಅದೇನು? ಆ ಗಿಡಕ್ಕೆ ಜೋತಾಡುವ ಅಂಗಿ ಯಾರದು? ಅದು ಠಾಕೂರಸಿಂಗನದೇ ಎಂದು ಸುಭೇದಾರನು ಹೇಳಿದನು.

"ಕೊಲೆಯಾದ ರಾತ್ರಿಯಲ್ಲಿ ಬಿರುಗಾಳಿ ಬಿಟ್ಟಿತ್ತೆ?" ಎಂದು ಹುಲಿವಿಶಾಸೆಯು ಕೇಳಲಾಗಿ ಗಾಳಿಯೇ ಇದ್ದಿಲ್ಲವೆಂಬ ಉತ್ತರ ಬಂದಿತು.

"ಹಾಗಾದರೆ ಈ ಅಂಗಿಯನ್ನು ಠಾಕೂರನು ತಾನಾಗಿಯೆ ಆ ಕೊಂಬೆಗೆ ತೆಗವಿಟ್ಟನೆನ್ನಬೇಕು!" ಎಂದು ಚಾಣಾಕ್ಷನಾದ ಸರಲಾಕ್ಷನು ಅಭಿಪ್ರಾಯಪಟ್ಟನು.

"ಇಕೋ ನೋಡಿರಿ! ಇಲ್ಲಿಯೇ ಹೆಣವು ಬಿದ್ದಿತ್ತು. ಇವು ಕುದುರೆಯ ಹೆಜ್ಜೆಗಳು; ಬೆಳ್ಳಿಯ ಚಿಕ್ಕೆಯ ಕಾಲಿನ ನಾಲಿಗೂ, ಇಲ್ಲಿ ಮೂಡಿದ ನಾಲಿಗೂ, ಎಷ್ಟುಮಾತ್ರವೂ ಹೆಚ್ಚು ಕಡಿಮೆಯಿಲ್ಲ. ಹದಿನೈದು ದಿವಸಗಳಾಚೆಗೆ ಆದ ಮಳೆಯಿಂದ ಇಲ್ಲಿ ಕೊಂಚ ಕೆಸರಾಗಿದ್ದುದರಿಂದ ಹೆಜ್ಜೆಗಳು ಚೆನ್ನಾಗಿ ಮೂಡಿರುವವು. ಮನುಷ್ಯರ ಹೆಜ್ಜೆಗಳೂ ಇವೆ. ಠಾಕೂರಸಿಂಗನು ಮೆಟ್ಟಿಕೊಂಡ ಜೋಡು ತಂದಿದ್ದೇನೆ; ನೋಡಿರಿ. ಇದು ಮಹಮ್ಮದ ಇಬ್ರಾಹೀಮನ ಜೋಡು. ಬೆಳ್ಳಿಯ ಚಿಕ್ಕೆಗೆ ಹೊಸ ನಾಲು ಕಟ್ಟಿಸಿದಾಗ ತೆಗೆದಿಟ್ಟ ಹಳೆಯ ನಾಲು ಇದು." ಎಂದು ಕೃಷ್ಣಭುಜಂಗನು ತಾನು ತಂದಿರುವ ವಸ್ತುಗಳನ್ನು ಹುಲಿವಿಶಾಸೆಗೆ ತೋರಿಸಿದನು.

"ಸಾಧು ಕೃಷ್ಣಭುಜಂಗ! ಕೆಲಸಮಾಡಬೇಕು ನೀವೇ." ಎಂದು ನುಡಿದು ಸರಲಾಕ್ಷನು ಬಾಗಿ, ಬಾಗಿ, ಆ ಸ್ಥಳದಲ್ಲಿಯ ಹೆಜ್ಜೆ ಮುಂತಾದವುಗಳನ್ನು ಒಳ್ಳೆಯ ಸೂಕ್ಷ್ಮವಾದ ರೀತಿಯಿಂದ ಪರೀಕ್ಷಿಸಿ ನೋಡಿದನು; ಬಳಿಕ ತುದಿ-ಬೆರಳುಗಳಿಂದ ತುಸು ನೆಲವನ್ನು ಕೆದರಿ ನೋಡಿ "ಓಹೋ! ಇದು ಮೇಣಬತ್ತಿಯ ರಸವಲ್ಲವೆ? ನೋಡಿರಿ ಕೃಷ್ಣಭುಜಂಗ." ಎಂದು ನುಡಿದು ಅವನು ತಾನು ಕೆದರಿದ ಪದಾರ್ಥವನ್ನು ಕೊತವಾಲನಿಗೆ ತೋರಿಸಿದನು.

"ಅಹುದು; ಇದು ಮೇಣಬತ್ತಿಯ ರಸವೇ! ಈ ರಸವು ಇಲ್ಲಿರಬಹುದೆಂದು ತರ್ಕಿಸಿ ಹಾಗೆ ನೀವು ಕೆದರಿ ನೋಡಿದಿರಾ? ನನಗಿದು ಆ ದಿವಸ ಕಾಣಿಸಲೇ ಇಲ್ಲ!" ಎಂದು ಕೃಷ್ಣಭುಜಂಗನು ಚಕಿತನಾಗಿ ನುಡಿದನು.

"ಇಕೋ! ಇದು ನೋಡಿರಿ; ಕೊರೆದ ದೀಪದಕಡ್ಡಿಯ ಚೂರು! ಮೃತನ ಜೇಬಿನಲ್ಲಿಯ ಪೆಟ್ಟಿಗೆಯೊಳಗಿನ ಕಡ್ಡಿಯೂ, ಈ ಕಡ್ಡಿಯೂ ಒಂದೇ ಆಗಿ ತೋರುತ್ತವೆ."

"ನಿಶ್ಚಯ! ಎರಡೂ ಕಡ್ಡಿಗಳೂ ಒಂದೆಯೇ!" ಎಂದು ಕೊತವಾಲನು ಉದ್ಗಾರ ತೆಗೆದನು.

"ಒಳ್ಳೆಯದು! ಇಲ್ಲಿಯ ಕೆಲಸವಾಯಿತು; ನಾನೂ ನಮ್ಮ ವಾತಾತ್ಮಜ ಪಂಡಿತರೂ ಕೂಡಿ ಹೀಗೆ ಅಡ್ಡ ದಾರಿಯಿಂದ ಹೋಗಿ ಇನ್ನಿಷ್ಟು ಇಲ್ಲಿಯ ವನಶೋಭೆಯನ್ನು ನೋಡಿಕೊಂಡು ಬರುತ್ತೇವೆ. ಕೃಷ್ಣಭುಜಂಗ, ನೀವು ಸುಭೇದಾರನನ್ನು ಕರೆದುಕೊಂಡು ಮನೆಗೆ ನಡೆಯಿರಿ. ಊಟದ ಸಮಯಕ್ಕೆ ನಾವು ಬಂದೇ ಬರುತ್ತೇವೆ. 'ಗಾಳಿಯ ಮಿಂಡ'ನೆಂಬ ಕುದುರೆಯ ಯಜಮಾನನಾದ ಜಾಫರಸೇಟನ ಲಾಯದ ಮನೆಯು ಎತ್ತ ಕಡೆಗಿರುವದು?" ಎಂದು ಹುಲಿಮೀಸೆಯು ಕೇಳಿದನು. ಅವರು ತೋರಿಸಿದರು.

"ಸರಲಾಕ್ಷರರಾವ್, ನೀವೂ ತಿರುಗಾಡಿಕೊಂಡು ಬನ್ನಿರಿ. ನಾವು ಕುವರಬಾಯಿಯ ಮನೆಯಲ್ಲಿ ಕುಳಿತುಕೊಂಡು, ನಿಮ್ಮ ಮಾರ್ಗಪ್ರತೀಕ್ಷೆಯ ಮಾಡುವೆವು. ಆ ಮೇಲೆ ಎಲ್ಲರೂ ರಥದಲ್ಲಿ ಕುಳಿತುಕೊಂಡು ಮನೆಗೆ ಹೋಗುವ." ಎಂದು ಹೇಳಿ ರಾಸಬಿಹಾರಿಯು ಕೃಷ್ಣಭುಜಂಗನನ್ನು ಕರೆದುಕೊಂಡು ನಡೆದನು. ನಾವೂ ನಮ್ಮ ಹಾದಿಯಿಂದ ನಡೆದೆವು.

"ಪಂಡಿತರೆ, ಈ ಪ್ರಕರಣದಲ್ಲಿ ಎರಡು ಮಾತುಗಳ ವಿಚಾರಗಳಿವೆ. ಠಾಕೂರಸಿಂಗನನ್ನು ಕೊಂದವರಾರೆಂಬುದು ಒಂದು. ಬೆಳ್ಳಿಯ ಚಿಕ್ಕೆಯು ಎಲ್ಲಿರುವದೆಂಬುದು ಇನ್ನೊಂದು. ಈ ಅಶ್ವಶಿಕ್ಷಕನ ಮರಣದ ಕಾರಣದ ಶೋಧದ ಮಾತು ಕಠಿಣವಾದುದು. ಕುದುರೆಯ ಮಾತು ಹಾಗಲ್ಲ; ಕುದುರೆಯನ್ನು ಯಾರೂ ಕೊಂದಿಲ್ಲವೆಂಬುದು ಸಿದ್ಧಾಂತವು. ಅದು ಬದುಕಿದ್ದರೆ ಎಲ್ಲಿರಬೇಕು?" ಎಂದು ಹುಲಿಮೀಸೆಯು ಉಪಕ್ರಮಿಸಿದನು.

"ಚಿಗರಿಕಾರರು ಒಯ್ದಿರಲಿ, ಇಲ್ಲವೆ ಮಹಮ್ಮದ ಇಬ್ರಾಹೀಮನೇ ಒಯ್ದಿರಲಿ, ಎರಡರಲ್ಲಿ ಒಂದು." ಎಂದು ಕೃಷ್ಣಭುಜಂಗನು ತರ್ಕಿಸುತ್ತಾನೆ.

"ಎರಡೂ ಸುಳ್ಳು. ಚಿಗರಿಕಾರರೂ ಒಯ್ದಿಲ್ಲ. ಕುಮಾರಿಯನ್ನು ಕಡಿದು ಅವರು ತಿನ್ನಬೇಕಾಗಿಲ್ಲ; ಮಾರಿಕೊಳ್ಳುವರೇ, ಬೆಳ್ಳಿಯ ಚಿಕ್ಕೆಯೇನು ಮುಚ್ಚುವ ಬದುಕೆ? ಇನ್ನು ಮಹಮ್ಮದ ಇಬ್ರಾಹೀಮನು ಒಯ್ದರೆ ಯಾತಕ್ಕೆ ಒಯ್ಯಬೇಕು? ಕಳುವೇ ಅವನ ಉದ್ದೇಶವಾಗಿದ್ದರೆ, ಮನೆಗಳಿಗೆ ಕನ್ನವನ್ನಿಕ್ಕಿ ಧನಕನಕಗಳನ್ನು ಕದಿಯುವ ಸುಲಭವಾದ ಸಾಧನವನ್ನು ಬಿಟ್ಟು, ಇಂತಹ ಗೋಜಿಗೆ ಅವನೇಕೆ ಹೋದಾನು?"

"ಬೆಳ್ಳಿಯ ಚಿಕ್ಕೆಯು ನಾಳಿನ ಓಟದಲ್ಲಿ ಬರಬಾರದೆಂಬುವ ಉದ್ದೇಶವು ಅವನದಾಗಿದ್ದರೆ, ಆವನು ಅದನ್ನು ಬಚ್ಚಿಡಬಾರದೇಕೆ?" ಎಂದು ನಾನು ಕೇಳಿದೆನು.

"ಒಳ್ಳೆಯ ಪ್ರಶ್ನೆ! ಆದರೆ ಬೆಳ್ಳಿಯ ಚಿಕ್ಕೆಯ ಕಾಲನ್ನೇ ಮುರಿದುಬಿಟ್ಟಿದ್ದರೆ, ಮಹಮ್ಮದ ಇಬ್ರಾಹೀಮನ ಕಾರ್ಯವು ಸುಲಭವಾಗಿ ಸಾಧಿಸುತ್ತಿತ್ತಷ್ಟೆ? ಕುದುರೆಯನ್ನು ಕಟ್ಟಿ ಅದಕ್ಕೆ ನೀರು-ಕೂಳು ನೀಡಿ, ಕಡೆಗೆ ಕಳುವಿನ ಶೋಧವಾದರೆ, ಅವನು ಶಿಕ್ಷೆಗೆ ಪಾತ್ರನಾಗುವನಲ್ಲವೆ ? ಇದು ಮಹಮ್ಮದ ಇಬ್ರಾಹೀಮನ ಕೆಲಸವೇ ಅಲ್ಲ."

"ಹಾಗಾದರೆ ಕುದುರೆಯು ಎಲ್ಲಿಗೆ ಹೋಗಬೇಕು?" ಎಂದು ನಾನು ಒಳ್ಳೆಯ ಆತ್ಯತೆಯಿಂದ ಕೇಳಿದೆನು.

"ಕಟ್ಟಿದ ಕುದುರೆಯನ್ನು ಬಿಟ್ಟಕೂಡಲೆ ತನ್ನ ಸ್ವಜಾತೀಯವಾದ ಪ್ರಾಣಿಗಳ ಹಿಂಡಿನಲ್ಲಿ ಸೇರಿಕೊಳ್ಳುವುದು ಅದರ ಸ್ವಭಾವ ಗುಣವು. ಈ ಪ್ರಾಂತದಲ್ಲಿ ಕುದುರೆಗಳು ಹಿಂಡುಗಳೆಂದರೆ ಎರಡೇ ಇರುವವು. ರಾಸಬಿಹಾರಿಯ ಲಾಯದ ಹಿಂಡು ಒಂದು, ಜಾಫರಸೇಟನ ಲಾಯದ ಹಿಂಡು ಮತ್ತೊಂದು. ಬೆಳ್ಳಿಯ ಚಿಕ್ಕೆಯು ರಾಸಬಿಹಾರಿಯ ಲಾಯಕ್ಕೆ ಬಂದಿಲ್ಲವಾದ ಮೇಲೆ ಅದು ಜಾಫರಸೇಟನ ಲಾಯಕ್ಕೆ ಹೋಗಿರಲಿಕ್ಕೇಬೇಕು."

"ಹಾಗಾದರೆ, ಅದು ಅತ್ತ ಹೋಗಿದೆಯೋ, ಹೇಗೆ, ಎಂಬುದನ್ನು" ನೋಡೋಣ, ನಡೆಯಿರಿ. ಹೆಜ್ಜೆಗಳ ಗುರುತು ಸಿಕ್ಕರೂ ಸಿಕ್ಕಬಹುದು. ಎಂದು ನಾನು ಸೂಚಿಸಿದೆನು.

"ನಡೆಯಿರಿ, ಇದು ಬಿರುಸಾದ ಭೂಮಿಯು. ಈ ದಿನ್ನೆಯನ್ನಿಳಿಯುವವರೆಗೂ ಹೆಜ್ಜೆಗಳ ಗುರುತು ಸಿಕ್ಕಲಾರದು. ಜಾಫರಸೇಟನ ಲಾಯವು ಇಲ್ಲಿಂದ ಪೂರ್ವಕ್ಕೆ ಇದೆಯೆಂತೆ! ನಾವೂ ಪೂರ್ವಾಭಿಮುಖರಾಗಿಯೇ ದಿನ್ನೆಯ ಇಳುಕಲಿನ ವರೆಗೆ ಹೋಗೋಣ. ಅಲ್ಲಿ ಭೂಮಿಯು ಮೆತ್ತಗಾಗಿರಲಿ, ಇಲ್ಲವೆ ಮಳೆನೀರಿನ ಹಸಿಯಾಗಲಿ, ಇದ್ದರೆ ಹೆಜ್ಜೆಗಳನ್ನು ನಾವು ಕಾಣಬಹುದು. ಕುದುರೆಯಂತೂ ಹೀಗೆಯೇ ಹೋಗಿರಲಿಕ್ಕೆ ಸಾಕು."

ದಿನ್ನೆಯ ಇಳುಕಲಿಗೆ ನಾವು ಬಂದು ನೋಡಲಾಗಿ, ಅಲ್ಲಿ ಕುಂಟೆಯಂತಹ ತಗ್ಗೇ ಇದ್ದು, ಅದರಲ್ಲಿಯ ನೆಲವಾದರೂ ಹಸಿಯಾಗಿಯೇ ಇತ್ತು. ಆ ಕುಂಟೆಯ ಒಂದು ದಡವನ್ನು ಹಿಡಿದು ಹುಲಿಮಿಾಸೆಯು ನಡೆದನು. ಇನ್ನೊಂದು ದಡವನ್ನು ಹಿಡಿದು ಹೆಜ್ಜೆಗಳ ಶೋಧಕ್ಕಾಗಿ ನೆಲವನ್ನು ನೋಡುತ್ತಲೇ ನಾನು ನಡೆದೆನು; ನಾಲ್ಕು ಹೆಜ್ಜೆ ಹೋಗುವಷ್ಟರಲ್ಲಿಯೇ ಶುಭಚಿಹ್ನವೇನೋ ನನಗೆ ಕಂಡಂತಾಯಿತು; ಹೋಗಿ ನೋಡಲಾಗಿ ಕುದುರೆಯ ಹೆಜ್ಜೆಗಳೇ; ಕುದುರೆಯಾದರೂ ಜಾಫರಸೇಟನ ಲಾಯದ ಕಡೆಗೆಯೇ ಹೋಗಿದ್ದಾಗಿ ಕಂಡಿತು; ಹರ್ಷಿತನಾಗಿ ನಾನು ಹುಲಿಮಿಾಸೆಯನ್ನು ಕೂಗಿ ಚಪ್ಪಾಳೆ ಹೊಡೆದೆನು; ಚಿಗರಿಯು ಹಾರಿದಂತೆ ಹಾರುತ್ತ ಸರಲಾಕ್ಷನು ನಾನಿದ್ದಲ್ಲಿಗೆ ಬಂದನು; ಹೆಜ್ಜೆಗಳನ್ನು ನೋಡಿದವನೇ ಅವನು ತನ್ನ ಜೇಬಿನಲ್ಲಿಯ ನಾಲು ತೆಗೆದು ಹೆಜ್ಜೆಯಲ್ಲಿ ಮೂಡಿದ ನಾಲಿಗೆ ಇಟ್ಟು ನೋಡಿದನು; ಕೂದಲೆಳೆಯಷ್ಟು ಬಿಡದೆ ಹೊಂದಿಕೆಯಾಯಿತು.

"ಭಾಪು! ಪಂಡಿತರೆ, ಈ ಪ್ರಕರಣದಲ್ಲಿ ದೈವವು ನಿಮಗೆ ಅನುಕೂಲವಾಯಿತು! ಆಗಲಿ! ಪ್ರತಿಯೊಂದು ಪ್ರಕರಣದಲ್ಲಿಯ ಪ್ರತಿಯೊಂದು ಮಾತಿನ ಶೋಧವು ನನ್ನಿಂದಲೇ ಆಗಬೇಕೆಂದು ಬರೆದು ಕೊಟ್ಟಿದೆಯೆ? ಬೆಳ್ಳಿಯ ಚಿಕ್ಕೆಯು ಜಾಫರಸೇಟನ ಲಾಯದ ಮಾರ್ಗವಾಗಿ ಹೋಗಿದೆಯೆಂಬುದರಲ್ಲಿ ಸಂದೇಹವಿಲ್ಲ." ಎಂದು ಸರಲಾಕ್ಷನು ವಿನೋದಗೈಯುತ್ತ ನುಡಿದನು.

"ಮತ್ತೆ ಈ ಏರಿಕೆಯಲ್ಲಿ ಕುದುರೆಯ ಖುರಪುಟಗಳ ಚಿಹ್ನಗಳು ಮೂಡಿದಂತೆ ಕಾಣುವುದಿಲ್ಲ." ಎಂದು ನಾನು ನೆಲವನ್ನು ನಿರೀಕ್ಷಿಸುತ ನುಡಿದೆನು.

"ಈ ದಿನ್ನೆಯ ಇಳಿಕೆಯಲ್ಲಿ ನಾವು ಮತ್ತೆ ಆ ಚಿಹ್ನಗಳನ್ನು ಕಾಣಬಹುದು; ನೆಟ್ಟಗೆ ನಾವು ಪೂರ್ವದಿಶೆಯನ್ನು ನೋಡಿಕೊಂಡು ನಡೆದರಾಯಿತು." ಎಂದು ಸರಲಾಕ್ಷನು ನುಡಿದನು.

ನಾವು ದಿನ್ನೆಯನ್ನಿಳಿದು ಅದರಡಿಯಲ್ಲಿದ್ದ ತೇವಿನ ಭೂಮಿಗೆ ಬಂದೆವು.

"ನೋಡಿರಿ ರಾಯರೆ, ಇಲ್ಲಿ ಕುದುರೆಯ ಹೆಜ್ಜೆಗಳಿವೆ." ಎಂದು ಹೇಳಿ ನಾನು ಆ ಹೆಜ್ಜೆಗಳನ್ನು ಹುಲಿವಿಲಾಸೆಗೆ ತೋರಿಸಿದೆನು; ಅವುಗಳನ್ನವನು ಕಣ್ಣಿಟ್ಟು ನೋಡಿದನು.

"ಮತ್ತೊಂದು ಚಮತ್ಕಾರವೇ! ಇಲ್ಲಿ ಕುದುರೆಯ ಹೆಜ್ಜೆಗಳೊಡನೆಯೇ ಮನುಷ್ಯನ ಹೆಜ್ಜೆಗಳಾದರೂ ಕಾಣುತ್ತವೆ. ಹಿಂದಿನ ಸ್ಥಳದಲ್ಲಿ ನಾವು ಈ ಮನುಷ್ಯನ ಹೆಜ್ಜೆಗಳನ್ನು ಕಾಣಲಿಲ್ಲ. ಅವನೆಲ್ಲಿಂದ ಬಂದನು?" ಎಂದು ಆಲೋಚಿಸುತ್ತ ಅವನು ಆ ಪ್ರದೇಶವನ್ನು ಸುತ್ತಾಡಿ ನೋಡಿದನು.

"ವಾತಾತ್ಮಜ, ಹೀಗೆ ಬನ್ನಿರಿ. ಕುದುರೆಯು ಮೊದಲು ತಾನೊಂದೆಯಾಗಿ ಜಾಫರನ ಲಾಯದ ಕಡೆಗೆ ಹೋಗಿದೆ. ಇಕೋ, ಇಲ್ಲಿ ಆ ಕುದುರೆಯು ಮರಳಿ ಬಂದ ಹೆಜ್ಜೆಗಳಾದರೂ ಇವೆ. ಆಮೇಲೆ ಮನುಷ್ಯನೊಬ್ಬನ ಹೆಜ್ಜೆಗಳು ಜಾಫರನ ಲಾಯದಿಂದ ಬಂದಂತೆ ಮೂಡಿವೆ; ಬಳಿಕ ಕುದುರೆಯೂ ಆ ಮನುಷ್ಯನೂ ಕೂಡಿಯೇ ಲಾಯದ ಕಡೆಗೆ ಹೋದ ಹೆಜ್ಜೆಗಳಿವು."

"ಇದೆಲ್ಲದರ ಅರ್ಥವೇನು ?" ಎಂದು ನಾನು ವಿಚಾರ ಮೂಢನಾಗಿ ಕೇಳಿದೆನು.

"ಅರ್ಥವೇನೆಂದರೆ, ಮೊದಲು ಕುದುರೆಯು ಜಾಫರನ ಲಾಯಕ್ಕೆ ಹೋಯಿತು. ಅಲ್ಲಿಯ ಕಾವಲುಗಾರನು ಆಗಂತುಕವಾದ ಅಶ್ವವನ್ನು ಹಿಂತಿರುಗಿ ಹೊಡೆದಟ್ಟಿದನು. ಬಳಿಕ ಮತ್ತೊಬ್ಬ ಉಪದ್ವ್ಯಾಪಿಯಾದ ಪುರುಷನಿಗೆ ಅಲ್ಲಿ ಬಂದಿರುವ ಕುದುರೆಯು, 'ಬೆಳ್ಳಿಯ ಚುಕ್ಕೆ' ಯೇ ಎಂದು ತಿಳಿದ ಕೂಡಲೆ, ಅವನು ಅದನ್ನು ಮತ್ತೆ ಹಿಡಿದುಕೊಂಡು ಹೋಗಿದ್ದಾನೆ. ಕುದುರೆಯು ಜಾಫರ ಸೇಟನ ಲಾಯದಲ್ಲಿಯಾಗಲಿ, ಅಲ್ಲಿಯೇ ಸಮೀಪದಲ್ಲಿ ಮತ್ತೆಲ್ಲಿಯಾಗಲಿ, ಸುರಕ್ಷಿತವಾಗಿದೆ. ನಡೆಯಿರಿ:

ಬೇಗ ಬೇಗ ಹೆಜ್ಜೆಗಳನ್ನಿಕ್ಕಿರಿ.” ಎಂದು ಹೇಳಿ ಸರಲಾಕ್ಷನು ಪೈಗು ವಿನ ವೇಗದಿಂದ ನಡೆಯಲಾರಂಭಿಸಿದನು.

ಜಾಫರನ ಲಾಯಕ್ಕೆ ಬಂದೆವು; ಆಳು ಕೊಡವನ್ನು ತೆಗೆದುಕೊಂಡು ನೀರಿಗೆ ನಡೆದಿದ್ದನು. ನಮ್ಮನ್ನು ಕಾಣುತ್ತಲೆ ಅವನು ಸೆಟೆಯಿಂದ ನಿಂತು ಕೊಂಡು, “ಯಾರು ನೀವು? ಯಜಮಾನರಿಗಿಂತ ಯಜಮಾನರಾಗಿ ನಿಮ್ಮ ಚ್ಛೆಯಿಂದಲೇ ಒಳಗೆ ನಡೆದಿರುವಿರಿ?” ಎಂದು ಗ್ರಾಮ್ಯನಿಗುಚಿತವಾದ ಔದ್ಧತ್ಯದಿಂದ ಕೇಳಿದನು. ಆ ಮನುಷ್ಯನ ಬಾಯಿ ಕೇಳುತ್ತಲೇ ಜಾಫ ರನ ಅಶ್ವಶಿಕ್ಷಕನಂತೆ ಕಾಣುವ ಮನುಷ್ಯನೊರ್ವನು ಕೈಯ್ಯಲ್ಲಿ ಚಬಕ ವನ್ನು ತೆಗೆದುಕೊಂಡು ಬಂದು “ಯಾರವರು ಕೆಂಜೆಡೆಯಪಾ?” ಎಂದು ಒಳ್ಳೆಯ ಕೋಪದಿಂದ ಕೇಳಿದನು.

“ಯಾರೋ! ನೀವೇ ನೋಡಿರಿ, ಗುಲಾಮಹುಸೇನಸಾಬರೆ, ಇಲ್ಲಿಯೇ ನಿಂತಿದ್ದಾರೆ.” ಎಂದು ಕೆಂಜೆಡೆಯು ಹೇಳಿದನು.

“ಯಾರು ನೀವು? ನಿಮಗೆಷ್ಟು ಸರಿಯಾಗಿ ಹೇಳಿದರೂ ನೀವು ಕೇಳು ವುದಿಲ್ಲ! ಒಬ್ಬರ ಲಾಯದಲ್ಲಿ ಒಬ್ಬರು ಬಂದು ಕಿಡಿಗೇಡಿತನವನ್ನು ಮಾಡುವಿರಲ್ಲವೆ? ತಡೆಯಿರಿ! ನಾಯಿಗಳನ್ನು ಬಿಟ್ಟು ನಿಮ್ಮ ಕಾಲಿನ ಮೀನಗಂಡಗಳನ್ನು ಹರಿಸಿದಾಗ ಮಾತ್ರ ನಿಮ್ಮ ಕಣ್ಣುಗಳು ತೆರೆಯು ವುವು!” ಎಂದು ನುಡಿದು ಗುಲಾಮಹುಸೇನನು ನಾಯಿಗಳ ಸರಪಣಿ ಗಳನ್ನು ಬಿಚ್ಚಹೋದನು.

“ಗುಲಾಮಹುಸೇನ್, ಉತ್ತಮವಾದ ಆ ನಾಯಿಗಳನ್ನು ನಮ್ಮ ಮೈಮೇಲೆ ಬಿಡಹೋಗಿ ವ್ಯರ್ಥವಾಗಿ ಅವುಗಳನ್ನು ಕೊಲ್ಲಿಸಬೇಡ. ಇಕೋ ನೋಡು, ನನ್ನ ಕೈಯಲ್ಲಿ ಪಿಸ್ತೂಲು ಇದೆ!” ಎಂದು ಹುಲಿಮೀಸೆಯು ಬಹು ಶಾಂತವೃತ್ತಿಯವನಾಗಿ ಗುಲಾಮ ಹುಸೇನಿಗೆ ಬುದ್ಧಿಯನ್ನು ಹೇಳಿದನು.

“ಕೊಲ್ಲು, ನೋಡುತ್ತೇನೆ!” ಎಂದು ಗುಲಾಮಹುಸೇನಿಯು ಎದೆಯುಬ್ಬಿಸಿಕೊಂಡು ಹಿಂತಿರುಗಿ ಹುಲಿಮೀಸೆಯನ್ನು ನೋಡುತ್ತ ಶಾತ್ಯ ದಿಂದ ಕೇಳಿದನು.

"ಹಾಗಲ್ಲ! ಸಾಬರೆ, ನಾವು ರಾಜಧಾನಿಯ ನಿವಾಸಿಗಳು. ಇಲ್ಲಿಯ ಉಸಾಬರಿಯನ್ನು ಮಾಡಿ ನಮಗೇನು ಕಟ್ಟಿಕೊಳ್ಳಬೇಕಾಗಿದೆ?" ಎಂದು ಸವಿಮಾತಾಡುತ್ತ ಸರಲಾಕ್ಷನು ಹುಸೇನಿಯ ರಟ್ಟೆಯಲ್ಲಿ ಕೈಹಾಕಿ ಅವನ ಕಿವಿಯಲ್ಲಿ ಏನನ್ನೋ ಹೇಳಿದನು.

"ಏನು? ಏನೆಂದಿರಿ?"

"ಸುಮ್ಮನಿರು! ಮೂರನೆಯವನ ಕಿವಿಮುಟ್ಟುವಂತೆ ನೀನು ಮಾತಾಡಿದರೆ, ಕೋಳದಲ್ಲಿ ನಿನ್ನ ಕೈಸಿಕ್ಕುವುದು. ಹೀಗೆ ಏಕಾಂತಕ್ಕೆ ಬಾ!" ಎಂದು ಹುಲಿಮೀಸೆಯು ಅವನನ್ನು ಒತ್ತಟ್ಟಿಗೆ ಕರೆದುಕೊಂಡು ಹೋಗಿ ಅವನೊಡನೆ ಅರೆಗಳಿಗೆಯವರೆಗೆ ಮಾತಾಡಿದನು. ಗುಲಾಮನು ಜೊಮ್ಮನೆ ಜೋತುಕೊಂಡು ಕೇಳುತ್ತಿದ್ದನು.

ಮಾತು ಮುಗಿದ ಬಳಿಕ ಹುಲಿಮೀಸೆಯು ನನ್ನನ್ನು ಕುರಿತು, "ವೈದ್ಯರೆ, ನಡೆಯಿರಿನ್ನು, ನಮ್ಮ ಕೆಲಸವಾಯಿತು!" ಎಂದು ಸಂತೋಷದಿಂದ ನುಡಿದು ನನ್ನನ್ನು ಕರೆದುಕೊಂಡು ನಡೆದನು. ಹೋಗುವಾಗ ಆವನು ಗುಲಾಮಹುಸೇನಿಯನ್ನು ಚದರಿಸಿ "ನೋಡು; ನಾನು ಹೇಳಿದಂತೆ ಮಾಡಲು ತಪ್ಪಿದಿಯಾದರೆ, ನಿನ್ನ ಚರ್ಮವನ್ನೇ ಸುಲಿಸುವೆನು." ಎಂದು ಶಾಸನಗೈದನು.

"ಪಂಡಿತ, ನಾವಿನ್ನು ಕುವರಬಾಯಿಯ ಮನೆಗೆ ಹೋಗಬೇಕಲ್ಲವೆ? ಅವಳು ಎಂತಹ ಸ್ವಭಾವದವಳಾದ ತರುಣಿಯೆಂಬುದು ನಿಮಗೆ ಅರಿಕೆಯಾಗಿದೆಯೊ?"

"ನನಗೆ ತಿಳಿದಿಲ್ಲ! ಕುವರಬಾಯಿಯು ಠಾಕೂರಸಿಂಗನ ಹೆಂಡತಿಯೆಂಬುದಿಷ್ಟೇ ಸರಿ!"

"ಇರಬಹುದು! ಆದರೆ ಅವಳು ಒನಪು-ಒಯ್ಯಾರಗಳಿಂದ ನಟಿಸುತ್ತಿರುವ ದುಂದುಗಾರತಿಯೆಂಬುದನ್ನಾದರೂ ನೀವು ಊಹಿಸಿರಬಹುದಲ್ಲವೆ?"

"ಹಾಗ್ಗೆ ತೋರುತ್ತಿದೆ." ಎಂದು ನಾನು ಒಪ್ಪಿಕೊಂಡೆನು.

"ಇಂತಹ ಹೆಂಡತಿಯ ಅನುರೋಧದಿಂದ ನಡೆಯುವ ಪತಿಯು ಆಯುಕ್ಕಿಂತಲೂ ವಯವು ಅಧಿಕವಾಗಿಯೇ ಇದ್ದಿರಬೇಕು ಗಂಡಸತ್ತ

ವಳಾದ ಕುವರಬಾಯಿಯ ಆಚರಣೆಯನ್ನು ನೋಡಿ ನೀವು ಹೀಗೆ ಊಹಿಸುವಿರಾದರೆ, ಠಾಕೂರಸಿಂಗನು ಜೀವದಿಂದಿರುವಾಗ ನೀವು ಆವಳ ನಡಾವಳಿಯನ್ನು ಕಂಡಿದ್ದರೆ, ನಿಮ್ಮ ಅಭಿಪ್ರಾಯವು ಏನಾಗುತ್ತಿತ್ತೋ ನೋಡಿಕೊಳ್ಳಿರಿ. ಸದ್ಯಕ್ಕೆ ಈ ಮಾತು ಸಾಕು. ಇದರ ಸಂದರ್ಭವನ್ನು ನಾನು ನಿಮಗೆ ಒಂದೆರಡು ದಿವಸಗಳಲ್ಲಿಯೇ ಹೇಳುವೆನು."

ಹೀಗೆ ಮಾತಾಡುತ್ತ ನಾವು ಕುವರಬಾಯಿಯ ಮನೆಗೆ ಬಂದೆವು. ಅಲ್ಲಿ ರಾಸಬಿಹಾರಿಯೂ ಕೃಷ್ಣಭುಜಂಗನೂ ನಮ್ಮ ಮಾರ್ಗಪ್ರತೀಕ್ಷೆಯನ್ನು ಮಾಡುತ್ತಲೇ ಕುಳಿತಿದ್ದರು:-

"ಸರಲಾಕ್ಷರಾಯರೆ, ಬನ್ನಿರಿ. ಎಲ್ಲೆಲ್ಲಿ ತಿರುಗಾಡಿ ಬಂದಿರಿ? ಈ ಪ್ರಕರಣದ ಸಂಬಂಧವಾಗಿ ನವಸಂಗತಿಗಳನ್ನು ಕಂಡುಬಂದಿರೊ?" ಎಂದು ಕೃಷ್ಣಭುಜಂಗನು ಕೇಳಿದನು.

"ಹೇಳಿಕೊಳ್ಳುವಂತಹ ಸಂಗತಿಗಳೇನೂ ಕಂಡುಬರಲಿಲ್ಲ!" ಎಂದು ಹುಲಿಮೀಸೆಯು ಮುಗುಳ್ನಗೆ ನಕ್ಕು ಹೇಳಿದನು.

"ಉಪಾಯವಿಲ್ಲ. ಹುಲಿಮೀಸೆಯವರೇ! ನಾಳೆಯ ಶರ್ಯತ್ತಿನಲ್ಲಿ ನಮ್ಮ ಬೆಳ್ಳಿಯ ಚಿಕ್ಕೆಯ ಚಮತ್ಕಾರವಾದ ಚಾಪಲ್ಯವನ್ನು ಕಂಡು ಕೌತುಕಬಡುವದಕ್ಕಾಗಿ ಅನೇಕ ಸ್ಥಳಗಳಿಂದ ಅಸಂಖ್ಯಾತರಾದ ಜನರು ಬರತಕ್ಕವರು. ಆ ನನ್ನ ಅಶ್ವರತ್ನವು ಸಮಯಕ್ಕೆ ಸಿಕ್ಕದಿರುವುದರಿಂದ ಅಷ್ಟು ಜನರೆಲ್ಲರೂ ನಿರಾಶೆಯನ್ನು ಹೊಂದಬೇಕಾಗುವದು. ಆದುದರಿಂದ ಬೆಳ್ಳಿಯ ಚಿಕ್ಕೆಯು ಶರ್ಯತ್ತಿಗೆ ಬರುವದಿಲ್ಲವೆಂದು ನಾನು ಈ ದಿವಸವೇ ಪ್ರಕಟಿಸಿಬಿಡುವೆನು." ಎಂದು ಸುಭೇದಾರನು ಉತ್ಸಾಹರಹಿತನಾಗಿ ನುಡಿದನು.

"ಹಾಗೆ ಮಾತ್ರ ಮಾಡಬೇಡಿರಿ! ಬೆಳ್ಳಿಯ ಚಿಕ್ಕೆಯು ಶರ್ಯತ್ತಿನ ದಿನ ಒಳ್ಳೆಯ ಸ್ಫೂರ್ತಿಯಿಂದ ಓಡಿ ವಿಜಯಿಯಾಗುವದೆಂದು ನಾನು ಎವೆ ತಪ್ಪಿ ಹೇಳುವೆನು." ಎಂದು ಹುಲಿಮೀಸೆಯು ಹಾಗೆ ನಟಿಸಿ ಹೇಳಿದನು.

"ನನ್ನ ಕುದುರೆಯು ಮತ್ತೆ ಹುಟ್ಟಿ ಬರಬೇಕಾಗಿಲ್ಲವಲ್ಲ! ಏನನ್ನು ಹೇಳುವಿರಿ, ರಾಯರೆ?"

"ಸತ್ತದ್ದೇ ನಿಜವಾದರೆ, ಬೆಳ್ಳಿಯ ಚಿಕ್ಕೆಯು ಹುಟ್ಟಿಯಾದರೂ ಬರುವುದು. ಬದುಕಿದ್ದರಂತೂ ಬಂದೇ ಬರುವದು. ಹೇಗೆ ಬಂದರೇನು ? ನಿಮ್ಮ ಕುದುರೆಯೇ ನಾಳೆಯ ಶರ್ಯತ್ತನ್ನು ಗೆದ್ದಂತಾಯಿತು."

"ಹೀಗೆಂದರೇನು ?"

"ನಾನು ಹೇಳುವುದು ನಿಜವು. ಹೇಗೆಂಬುದನ್ನು ಮಾತ್ರ ಕೇಳಬೇಡಿರಿ."
ಕುವರಬಾಯಿಯು ಚಹ-ಉಪಹಾರಗಳನ್ನು ತರಿಸಿ ನಮ್ಮೆಲ್ಲರಿಗೆ ತೆಗೆದುಕೊಳ್ಳಹೇಳಿದಳು; ಅದಾದ ಬಳಿಕ ನಾವೆಲ್ಲರೂ ರಥದಲ್ಲಿ ಕುಳಿತು ಸುಭೇದಾರರ ಮನೆಗೆ ಬಂದೆವು; ಕೂಡಲೆ ಹುಲಿಮೀಸೆಯು ಗಂಟು ಕಟ್ಟಿಸಿಕೊಂಡು ರಾಜಧಾನಿಗೆ ಹೊರಡಲು ಸಿದ್ಧನಾಗಿ ನಿಂತುಕೊಂಡನು; ಭೋಜನವ ತೀರಿಸಿಕೊಂಡು ಹೋಗಿರೆಂದು ಸುಭೇದಾರನು ಹೇಳಿಕೊಂಡರೂ ಕೇಳಲಿಲ್ಲ. ಉಗೆಬಂಡಿ ಬರುವ ಸಮಯವೇ ಆಗಿತ್ತಾದುದರಿಂದ ಭೋಜನಕ್ಕೆ ಅವಕಾಶವಿರಲಿಲ್ಲ.

"ಬರುತ್ತೇನೆ. ಸುಭೇದಾರ ! ನಾಳೆಯ ಶರ್ಯತ್ತಿನಲ್ಲಿ ನಾನಿಲ್ಲಿಗೆ ನಿಶ್ಚಯವಾಗಿ ಬರುವೆನು. ಬೆಳ್ಳಿಯ ಚಿಕ್ಕೆಯ ಹೆಸರನ್ನು ಬಹಳವಾಗಿ ಹೇಳುತ್ತಾರೆ. ಅದರ ಓಟವನ್ನು ನೋಡುವ ಕುತೂಹಲವು ನನಗಾಗಿದೆ." ಎಂದು ಹೇಳಿದವನೇ ಹುಲಿಮೀಸೆಯು ರಥದಲ್ಲಿ ಕುಳಿತನು. ಬಸವನ ಹಿಂದೆ ಬಾಲವೆಂಬಂತೆ ನಾನೂ ಅವನೊಡನೆ ನಡೆದೆನು.

* * * * *

ವಾತಾಪೀಪುರದ ಗುಡ್ಡದ ಓರೆಯಲ್ಲಿರುವ ಬಯಲಿನಲ್ಲಿ ಗಾಲಿಯ ಅಂಚಿನಂತೆ ವರ್ತುಲಾಕಾರವಾಗಿ ಒಂದು ಬೀದಿಯನ್ನು ಮಾಡಿದ್ದರು. ಆ ಬೀದಿಯ ಸುತ್ತಲೂ ಕಣಗಟ್ಟಿ ಜನಜಾತ್ರೆ ನೆರೆದಿತ್ತು. ಬೀದಿಯ ಒಳಮಗ್ಗುಲಿಗಿರುವ ಮಂಡಲಾಕಾರವುಳ್ಳ ಪ್ರದೇಶದ ಮಧ್ಯಭಾಗದಲ್ಲಿ ನಾಲ್ಕಾರು ಭವ್ಯವಾದ ತಂಬುಗಳನ್ನು ಹೊಡೆದಿದ್ದರು. ಆಗರ್ಭ ಶ್ರೀಮಂತರಾದ ನರನಾರಿಯರು ಮನದುಬ್ಬಿನಿಂದ ತಂಬುಗಳ ಸುತ್ತಲೂ ಎಡೆಯಾಡುತ್ತಿದ್ದರು. ಬೀದಿಯ ಒಂದು ಮಗ್ಗುಲಿಗೆ ಜನಸಂದಟ್ಟಣೆಯಿದ್ದರೆ. ಈಚೆಯ ಮಗ್ಗುಲಲ್ಲಿ ಕಟ್ಟಿರುವ ಮೆಂಚಿಕೆಗಳ ಮೇಲೆ ಧನಸಂಪನ್ನರಾದ ಜನರು ಕುಳಿತುಕೊಂಡು, ಇನ್ನು ಮೇಲೆ ನಡೆಯುತಕ್ಕ ಶರ್ಯತ್ತುಗಳನ್ನು

ನೋಡತಕ್ಕವರಾಗಿದ್ದರು. ನೆಲದ ಮೇಲೆ ನಿಲ್ಲಲೊಲ್ಲದೆ ಸ್ಫೂರ್ತಿಯಿಂದ ಅಂತರಗಾಲಿಟ್ಟು ಕುಣಿಯುವ ಕುದುರೆಗಳನ್ನೇರಿಕೊಂಡು, ರಾವುತರು ಶರ್ಯತ್ತಿನ ಸಮಯ ನಿರೀಕ್ಷಣವನ್ನು ಬಹು ಕಷ್ಟದೊಂದಿಗೆ ಮಾಡುತ್ತಿದ್ದರು. “ಅಕೋ, ನೋಡಿರಿ; ‘ಗಾಳಿಯ ಮಿಂಡ,’ ಅದು ‘ಕಡಿದ ಬಂಟ;’ ಎಂತಹ ಉತ್ತಮವಾದ ತೇಜಿಯಿದು? ‘ಬೆಳ್ಳಿಯ ಚಿಕ್ಕೆಯಲ್ಲಿಯೂ ಕಾಣುವುದಿಲ್ಲ.’ ಹೀಗೆ ನೆರೆದವರಲ್ಲಿ ಅನೇಕರು ಅನೇಕವಾದ ಉದ್ಗಾರಗಳನ್ನು ತೆಗೆದರು. “ಢಣ್! ಢಣ್! ಢಣ್! ಢಣ್!” ಎಂದು ಝಗಂಗಟೆಯು ನಾಲ್ಕು ಬಾರಿಸಿತು. ಸಂಗಡಲೆ, ಕುದುರೆಗಳೆಲ್ಲವೂ ಬೀದಿಗೆ ಬಂದು ಸಾಲು ಹಿಡಿದು ಓಡಲುದ್ಯುಕ್ತವಾಗಿ ನಿಂತುಕೊಂಡವು ವಾತಾಪೀಪುರದ ದೇಸಾಯರ ದಳವಾಯಿಯು ‘ಫೋಂ ಫೋಂ ಫೋಂ’ ಎಂದು ಕಹಳೆಯನ್ನೂದಿದ ಕೂಡಲೆ ಕುದುರೆಗಳೆಲ್ಲ ಆರ್ಭಟಿಯಿಂದ ಹೇಂಕರಿಸಿ ಥಿಂಕಿಟ್ಟು ಓಡಿದವು “ಗಾಳಿಯ ಮಿಂಡನೇ ಅದು, ಅದೇ ಎಲ್ಲಕ್ಕೂ ಮುಂದೆ ಬರುವದು.” ಎಂದು ಕೆಲವರು ಉದ್ಗಾರ ತೆಗೆದರು. “ಅಕೋ ನೋಡಿರಿ; ವೀರಕೇಸರಿಯು ಎಲ್ಲ ಕುದುರೆಗಳನ್ನು ಹಿಂದೆ ಹಾಕಿ ಸುಟ್ಟರ ಗಾಳಿಯ ವೇಗದಿಂದ ನಡೆದಿರುವುದು.” ಎಂದು ಅನೇಕರು ಒಂದೇ ಧ್ವನಿಗೊಟ್ಟು ಕೂಗಿದರು. “ಕಡಿದ ಬಂಟನ ಕಡಿತವೇ ಯಾರಿಗೂ ತಿಳಿದಿಲ್ಲ. ಈಗ ನೋಡಿರಿ; ಅದೇ ಹೇಗೆ ಚಮತ್ಕಾರವಾಗಿ ಎಲ್ಲ ಕುದುರೆಗಳನ್ನು ಹಿಂದೆ ಹಾಕವದು.” ಎಂದು ಅನೇಕರು ತಮಗೆ ಪರಿಚಿತವಾದ ಕುದುರೆಯ ಗುಣವನ್ನು ಕಂಡವರಾಗಿ ತರ್ಕಿಸಿದರು.

“ಅಬ್ಬಬ್ಬೆ! ಆ ಕರಿಗುದುರೆಯನ್ನು ನೋಡಿರಿ! ಅದೇನು ಕುದುರೆಯೋ, ವೇತಾಳವೋ, ಕಾಣೆವು. ತಾಯಿಗಂಡನದು, ಹಿಂದಕ್ಕುಳಿದಂತೆ ಮಾಡಿ, ಈಗ ಹೇಗೆ ಮಿಂಚಿನ ಚಪಲತೆಯಂತೆ ಓಡಿತು. ಅಷ್ಟು ಜನರ ಮಾತೆಲ್ಲ ಸುಳ್ಳು! ಈ ಕರಿಗುದುರೆಯೇ ವಿಜಯಿಯಾಗುವದು! ಸಂದೇಹವಿಲ್ಲ.” ಎಂದು ನೆರೆದ ಪರಸಿಗೆ ಪರಸಿಯೇ ಉದ್ಗಾರ ತೆಗೆಯಿತು.

ಸಂಗಡಲೇ ಅನೇಕರು ತಮ್ಮ ಕಣ್ಣಿಗೆ ದೃಷ್ಟಿಯಂತ್ರವನ್ನಿಕ್ಕಿಕೊಂಡು ನೋಡಿದರು. ಅನೇಕರು ಹುಬ್ಬುಗೈಯಿಕ್ಕಿ ನೋಡಿದರು. ಚಪಲರಾದ ಹುಡುಗರು ಮರಗಳನ್ನೇರಿಕೊಂಡು ನೋಡಲಾರಂಭಿಸಿದರು. ಅವರು ನೋಡು ನೋಡುವಷ್ಟರಲ್ಲಿಯೇ ಆ ಕೃಷ್ಣವರ್ಣದ ತುರಂಗಮವು ಎಲ್ಲ ಕುದುರೆಗಳನ್ನು ಹತ್ತಿಪ್ಪತ್ತು ಮಾರು ಹಿಂದೊಗೆದು ಗೆಲ್ಲು-ಕಟ್ಟಿಗೆ ಬಂದು

ನಿಂತಿತು. ಪ್ರಮುಖರೆಲ್ಲರೂ ಜಯಘೋಷವನ್ನು ಮಾಡಿ ಕುದುರೆಯ ಹತ್ತಿ ರಕ್ಕೆ ಬಂದು ಬಿಳಿಯ ಅಕ್ಕರತೆಯಿಂದ ಅದರ ಹೆಡಕು ಚಪ್ಪರಿಸಿದರು.

"ಓ! ಹುಲಿಮೀಸೆಯವರೇ, ಯಾವಾಗ ಬಂದಿರಿ? ಎಲ್ಲಿದೆ ನನ್ನ ಬೆಳ್ಳಿಯ ಚಿಕ್ಕೆ? ಅದೇ ಇಂದಿನ ದಿವಸ ವಿಜಯಿಯಾಗುವುದೆಂದು ಎದೆಗೆ ಕಣಕವನ್ನು ಹಚ್ಚಿಕೊಂಡು ಹೇಳಿದ್ದಿರಿ!" ಎಂದು ರಾಸಬಿಹಾರಿಯು ಸರಲಾಕ್ಷನ ಉಪಮರ್ದವನ್ನು ಮಾಡಿ ನುಡಿದನು.

ಸರಲಾಕ್ಷನು ಒಳಿತಾಗಿ ನಕ್ಕು "ಸುಭೇದಾರರೆ, ನಿಮ್ಮ ಕುದುರೆಯ ಗುರುತು ನಿಮಗಿಲ್ಲದಾಯಿತೆ? ಈ ಬಂಟನಾರು?" ಎಂದು ಆ ಕರಿಗುದುರೆಯನ್ನು ತೋರಿಸಿ ಕೇಳಿದನು.

"ಇದು ನನ್ನ ಕುದುರೆಯೆ? ಇದು ಬೆಳ್ಳಿಯ ಚಿಕ್ಕೆಯೇ? ಇದರ ಹಣೆಯ ಮೇಲೆ ಒಂದಾದರೂ ಬಿಳಿಯ ಕೂದಲಿಲ್ಲ. ನನ್ನ ಕುದುರೆಯ ಹಣೆಯ ಮೇಲೆ ಚಂದ್ರಮನಷ್ಟು ಧಾಳವಾದ ಹಣೆಚಿಕ್ಕೆಯಿದೆ!" ಎಂದು ಸುಭೇದಾರನು ಶಂಕಾಯುತನಾಗಿ ನುಡಿದನು.

"ಹೀಗೆ ಆ ಕುದುರೆಯನ್ನು ತೆಗೆದುಕೊಂಡು ಒತ್ತಟ್ಟಿಗೆ ಬನ್ನಿರಿ." ಎಂದು ಹೇಳಿ ಹುಲಿಮೀಸೆಯು, ಸುಭೇದಾರನನ್ನೂ ಕುದುರೆಯನ್ನೂ, ಕಟ್ಟಿಕೊಂಡು ತಂಬುವಿಗೆ ಬಂದನು. ಅಲ್ಲಿ ಆ ಮಹಾಶೋಧಕನು ಟರ್ಪೆಂಟಿ ಎಣ್ಣೆಯಿಂದ ಕುದುರೆಯ ಹಣೆಯನ್ನು ತೊಳೆಯಿಸಲಾಗಿ ನಿಜವಾಗಿಯೇ ಚಂದ್ರಮನಂತೆ ಧಾಳವಾದ ಹಣೆಚಿಕ್ಕೆಯು ಸುವ್ಯಕ್ತವಾಗಿ ತೋರಿತು. ಸುಭೇದಾರನು ಸಂತೋಷದ ಭರದಲ್ಲಿ ಕುದುರೆಯ ಕೊರಳಿಗೆ ಬಿದ್ದು ಅದನ್ನು ಅಪ್ಪಿಕೊಂಡನು.

"ಸರಲಾಕ್ಷರಾವ್, ಇಂದು ನನಗೆ ಸಿಕ್ಕತಕ್ಕ ಬಹುಮಾನದ ಹಣವೆಲ್ಲವೂ ನಿಮ್ಮದೆ. ಹಾಗೆ ನಗಬೇಡಿರಿ! ನಾನು ಸುಳ್ಳಾಡಿದವನಲ್ಲ. ಇಕೋ, ಈ ಪಂಡಿತ ವಾತಾತ್ಮಜರೇ ನನ್ನ ವಚನಕ್ಕೆ ಸಾಕ್ಷಿಗಳಾಗಿದ್ದಾರೆ."

"ಆಗಲಿ! ನಿಮ್ಮ ಮನಸ್ಸಿಗೆ ತಿಳಿದಂತೆ ಮಾಡಿರಿ. ಹಣವು ಬೇಕೆಂದು ನಾನು ಆಗ್ರಹ ತೊಡುವುದಿಲ್ಲ" ಎಂದು ಹುಲಿಮೀಸೆಯು ಹೇಳಿದನು.

"ಚತುರರಾದ ನನ್ನ ಮಹಾರಾಯರೆ, ನಿಮ್ಮ ಕೃಪೆಯಿಂದ ನನ್ನ ಅಶ್ವರತ್ನವನ್ನು ನಾನು ಮತ್ತೆ ಕಂಡೆನು. ಆದರೆ ನಮ್ಮ ಠಾಕೂರಸಿಂಗನ

ಕೊಲೆ ಮಾಡಿದವನ ಶೋಧವು ಮಾತ್ರ ಇನ್ನೂ ಆಗಲಿಲ್ಲವಾಗಿ ತೋರು ತ್ತದೆ." ಎಂದು ಸುಭೇದಾರನು ಕೇಳಿದನು.

"ಶೋಧವಾಗಿದೆ. ಆದರೆ ಆ ಶೋಧದಿಂದ ನಿಮಗೆ ಸಾಕಷ್ಟು ಸಮಾಧಾನವಾಗಲಿಕ್ಕಿಲ್ಲ."

"ಆಗಲಿ, ಆಗದಿರಲಿ! ಠಾಕೂರಸಿಂಗನನ್ನು ಕೊಂದವನಾರು ಹೇಳಿ ಬಿಡಿರಿ."

"ಕೊಂದವನು ನನ್ನ ಬಳಿಯಲ್ಲಿಯೇ ನಿಂತಿರುವನು." ಎಂದು ಹುಲಿ ಮೀಸೆಯು ಸುಭೇದಾರನ ಮುಖವನ್ನು ನೋಡಿ ನುಡಿದನು.

"ಏನೆಂದಿರಿ? ಇದ್ದ ಮೂರು ಮಂದಿಯಲ್ಲಿ ಕದ್ದವರಾರೆಂತೆ! ನೀವು ನಗೆಯಾಡುವುದಿಲ್ಲವಷ್ಟೇ?" ಎಂದು ಸುಭೇದಾರನು ಕಿಂಚಿತ್ ಕ್ರುದ್ಧ ನಾಗಿಯೂ ಕಿಂಚಿತ್ ಕುತೂಹಲವುಳ್ಳವನಾಗಿಯೂ ಕೇಳಿದನು.

"ನಾನು ನಗೆಯಾಡುವುದಿಲ್ಲ. ಠಾಕೂರಸಿಂಗನನ್ನು ಕೊಂದವನು ನನ್ನಿಂದ ಒಂದು ಮೊಳದ ಅಂತರದಲ್ಲಿಯೇ ನಿಂತಿರುವನು."

"ಹುಲಿಮೀಸೆ, ನೀವು ನನ್ನನ್ನು ಉದ್ದೇಶಿಸಿ ಹೀಗೆ ಮಾತಾಡಿದ್ದಾ ದರೆ ನಿಮ್ಮ ನಾಲಿಗೆ ಜೋಕೆ ಕಂಡಿರಾ!"

ಹುಲಿಮೀಸೆಯು ಸುಭೇದಾರನಿಗೆ ಪ್ರಣಾಮಮಾಡಿ ನಗುತ್ತ "ಕ್ಷಮಿ ಸಿರಿ ಸುಭೇದಾರರೇ! ನಾನು ನಿಮ್ಮನ್ನುದ್ದೇಶಿಸಿ ಹಾಗೆ ಮಾತಾಡಲಿಲ್ಲ. ಠಾಕೂರಸಿಂಗನ ಕೊಲೆ ಮಾಡಿದವನು ಈ ನಮ್ಮ ಬೆಳ್ಳಿಯ ಚಿಕ್ಕಪ್ಪನು" ಎಂದು ಬೆಳ್ಳಿಯ ಚಿಕ್ಕೆಯ ಜುಟ್ಟನ್ನು ಆದರದಿಂದ ತೀಡುತ್ತ ನುಡಿದನು.

"ಹೇಗೆ? ಹೇಗೆ? ಹೇಳಿರಿ!"

"ಮೊದಲು ಮನೆಗೆ ಹೋಗೋಣ, ಅಲ್ಲಿ ವಿಶ್ರಬ್ಧವಾಗಿ ಕುಳಿತು ಕೊಂಡು ಎಲ್ಲ ಸಮಾಚಾರವನ್ನೂ ಹೇಳುವೆನು. ಕೊತವಾಲ ಕೃಷ್ಣ ಭುಜಂಗರನ್ನೂ ಹೀಗೆ ಕರೆಯಿರಿ." ಎಂದು ಹುಲಿಮೀಸೆಯು ಹೇಳಿದನು.

ನಾವೆಲ್ಲರೂ ರಥದಲ್ಲಿ ಕುಳಿತುಕೊಂಡು ಸುಭೇದಾರನ ಮನೆಗೆ ಹೋದೆವು. ಚಹಾಪಾನವಾದ ಬಳಿಕ ಹುಲಿಮೀಸೆಯು ತಾನು ಮಾಡಿದ ಶೋಧದ ಸಮಾಚಾರವನ್ನು ಹೇಳಲಾರಂಭಿಸಿದನು.

"ಸುಭೇದಾರ, ನಿಮ್ಮ ಠಾಕೂರಸಿಂಗನು ಅಸಂಭಾವಿತನಾದ ಮನುಷ್ಯನಾಗಿದ್ದನು. ಹೆಂಡತಿಯ ದಂಭಾಚಾರಕಕ್ಕಾಗಿ ಅವನು ಸಾಲಗಾರನಾದನು. ಅವನಿಗಿರುವ ಸಂಬಳ ಐವತ್ತು. ತಿಂಗಳಿಗೆ ಅವನ ವೆಚ್ಚವು ನೂರು ನೂರಿಪ್ಪತ್ತಾಗಿರಬಹುದು. ತನಗಾದ ಸಾಲವನ್ನು ತೀರಿಸುವದಕ್ಕಾಗಿ ಆ ನೀಚನು ಅನ್ನದಾತೃಗಳಾದ ನಿಮ್ಮ ಮೇಲೆ ದ್ರೋಹ ಮಾಡಹೋಗಿ ಜೀವಕ್ಕೆ ಎರವಾದನು."

"ಹೀಗೆ ದ್ರೋಹವನ್ನು ಮಾಡಲೆಸಗಿದನೆ?" ಎಂದು ಕೃಷ್ಣಭುಜಂಗನು ಚಕಿತನಾಗಿ ಕೇಳಿದನು.

"ಬೆಳ್ಳಿಯ ಚಿಕ್ಕೆಯು ಶರ್ಯತ್ತಿನಲ್ಲಿ ಮುಂದೆ ಬರಬಾರದೆಂದು ಜಾಫರಸೇಟನೇ ಮೊದಲಾದ ಅನೇಕ ಜನರು ಇಚ್ಛಿಸುವದು ವಿಹಿತವೆ. ಅದಕ್ಕಾಗಿ ಏನನ್ನಾದರೂ ಮಾಡಿ ಆ ಕುದುರೆಯನ್ನು ಕುಂಟುಗೆಡವಿದರೆ ಠಾಕೂರಸಿಂಗನಿಗೆ ಸಾವಿರಾರು ರೂಪಾಯಿ ಕೊಡುವೆವೆಂದು ಜಾಫರನೇ ಮೊದಲಾದ ಜನರು ಸೂಚಿಸಿದ ಮೇರೆಗೆ, ಠಾಕೂರನು ಆ ದುಷ್ಕೃತ್ಯವನ್ನು ಮಾಡಲಿಕ್ಕೆ ಸಿದ್ಧನಾದನು.

"ಮಧ್ಯರಾತ್ರಿಯಲ್ಲಿ ಅವನು ಲಾಯಕ್ಕೆ ಬಂದು ತನ್ನ ಬಳಿಯಲ್ಲಿರುವ ಬೀಗದ ಕೈಯಿಂದ ಬಾಗಿಲನ್ನು ತೆರೆದನು. ಒಳಗಿನ ನಾಯಿಗಳು ಪರಿಚಯದವನಾದ ಆ ಅಶ್ವಶಿಕ್ಷಕನನ್ನು ಕಂಡು ಬೊಗಳಲಿಲ್ಲ. ಠಾಕೂರಸಿಂಗನೇ ಗಂಗಾದೀನನ ಭೋಜನದಲ್ಲಿ ಅಫೀಮು ಕಲೆಯಿಸಿ ಮೊದಲೇ ಕಳುಹಿಸಿದ್ದನು; ಅದನ್ನು ತಿಂದು ಗಂಗಾದೀನನು ಎಚ್ಚರದಪ್ಪಿ ಮಲಗಿಕೊಂಡು ಬಿಟ್ಟಿದ್ದನು."

"ಠಾಕೂರನು ಕುದುರೆಯನ್ನು ಆ ತಗ್ಗಿಗೆ ಒಯ್ದು ತನ್ನ ಉದ್ದಂಗಿಯನ್ನು ಗಿಡಕ್ಕೆ ತೂಗ ಹಾಕಿ ಕಡ್ಡಿಯನ್ನು ಕೊರೆದು ಮೇಣಬತ್ತಿಗೆ ದೀಪವನ್ನು ಅಂಟಿಸಿದನು. ಸುಟ್ಟ ಕಡ್ಡಿಯ ಚೂರನ್ನೂ ಮೇಣಬತ್ತಿಯ ರಸವನ್ನೂ ನೀವೆಲ್ಲರೂ ಆ ಸ್ಥಳದಲ್ಲಿ ಕಂಡಿರುವಿರಷ್ಟೆ?

"ಬಳಿಕ ಆ ನೀಚನು ಚಾಕುವಿನಂತಹ ತೀಕ್ಷ್ಣವಾದ ಶಸ್ತ್ರದಿಂದ ಬೆಳ್ಳಿಯ ಚಿಕ್ಕೆಯ ಒಳದೊಡೆಯೊಳಗಿನ ನರಕ್ಕೆ ನೋವು ಮಾಡಹೋದನು. ಕುದುರೆಯು ಬೆದರಿ ಹಾರಾಡಿತು. ಠಾಕೂರನು ತಾನು ತೆಗೆದುಕೊಂಡು

ಬಂದ ಗದ್ದೇಮುಡಿಯು ವಸ್ತ್ರದಿಂದ ಕುದುರೆಯು ಹಿಂಗಾಲಿಗೆ ದಳಿ ಕಟ್ಟಿ ಹೋಗಲಾಗಿ, ಬೆಳ್ಳಿಯ ಚಿಕ್ಕೆಯು ಮತ್ತಿಷ್ಟು ಬೆದರಿ ಸರಿದು ನಿಂತು ಒಳಿತಾಗಿ ಒದೆಯಿತು. ಸಾಲುಳ್ಳ ಹಿಂಗಾಲಿನ ಖುರದ ಭರದ ಪೆಟ್ಟಿನಿಂದ ಠಾಕೂರಸಿಂಗನ ಹಣೆಯೊಡೆದು ಚಿಪ್ಪಡಿಯಾಗಿ ಆವನಲ್ಲಿಯೇ ಗತಪ್ರಾಣನಾಗಿ ಬಿದ್ದುಬಿಟ್ಟನು."

"ಮುಹಮ್ಮದ ಇಬ್ರಾಹೀಮನ ಗದ್ದೇಮುಡಿಯು ವಸ್ತ್ರವು ಠಾಕೂರನಿಗೆ ಹೇಗೆ ಸಿಕ್ಕಿತು?" ಎಂದು ಕೃಷ್ಣಭುಜಂಗನು ಕೇಳಿದನು.

"ಅದನ್ನು ತಾನು ಮಾರ್ಗದಲ್ಲಿ ಕಳೆದುಕೊಂಡೆನೆಂದು ಮುಹಮ್ಮದನು ಹೇಳಲಿಲ್ಲವೆ? ಅಕಸ್ಮಾತ್ತಾಗಿ ಸಿಕ್ಕ ವಸ್ತ್ರವು ತನ್ನ ಉಪಯೋಗಕ್ಕೆ ಬರುವುದೆಂದು ತಿಳಿದು ಠಾಕೂರನು ಅದನ್ನು ಎತ್ತಿಕೊಂಡನು."

"ಹಾಗಾದರೆ ಮುಹಮ್ಮದ ಇಬ್ರಾಹೀಮನು ನಿರ್ದೋಷಿಯು?" ಎಂದು ಕೃಷ್ಣಭುಜಂಗನು ಕೇಳಿದನು.

"ಸಂದೇಹವೇಕೆ? ನೀವು ಆ ನಿರಪರಾಧಿಯನ್ನು ನಾಳೆಯೇ ಬಿಟ್ಟುಬಿಡಿರಿ."



# ಅನುಬಂಧ. ೧

——ooo0ooo——

## ವೃತ್ತಗಳು.

ಕನ್ನಡ ಪದ್ಯಗಳನ್ನು ವರ್ಣವೃತ್ತ ಮಾತ್ರಾವೃತ್ತ ಹಾಡುಗಬ್ಬ ಗಳೆಂದು ವಿಭಾಗಿಸಬಹುದು. ವರ್ಣವೃತ್ತಗಳು ಸಂಸ್ಕೃತದಿಂದ ಕನ್ನಡಕ್ಕೆ ಬಂದಂಥವು. ಮಾತ್ರಾವೃತ್ತಗಳು ಕನ್ನಡ ಕವಿಗಳಿಂದಲೇ ಸಂಸ್ಕೃತ ಛಂದ ಸ್ಸನ್ನವಲಂಬಿಸದೆ ಸ್ವತಂತ್ರವಾಗಿ ಕಲ್ಪಿಸಲ್ಪಟ್ಟಂಥವು. ಹಾಡುಗಬ್ಬಗಳು ತಾಳಲಯಕ್ಕನುಸರಿಸಿ ಅಜ್ಞರಿಗೂ ಕೂಡ ಬೋಧವೂ ಮನರಂಜನವೂ ಆಗುವಂತೆ ಇಂಪಾದ ಸ್ವರದಲ್ಲಿ ಹಾಡಲಿಕ್ಕೆ ಬರುವಂಥವು. ವರ್ಣ ಮತ್ತು ಮಾತ್ರಾವೃತ್ತಗಳನ್ನು ತಿಳಿದುಕೊಳ್ಳಬೇಕಾದರೆ ಲಘು, ಗುರು, ಗಣಗಳನ್ನು ಮೊದಲು ಅರಿತುಕೊಳ್ಳುವುದು ಅಗತ್ಯ.

**ಲಘುः—** ಹ್ರಸ್ವಸ್ವರ ಹ್ರಸ್ವಸ್ವರದಿಂದ ಕೂಡಿದ ಅಕ್ಷರ ಇವು ಗಳಿಗೆ ಲಘುವೆನ್ನುವರು. ಉದಾಃ— ಕುವಲಯದಳನಯನೆ. ಲಘುವನು "ಲ" ಎಂಬ ಅಕ್ಷರದಿಂದಾಗಲಿ "᠎‿" ಈ ಚಿನ್ಹದಿಂದಾಗಲೀ ಬರೆಯು ವರು. ಒಂದು ಲಘುವಿಗೆ ಒಂದು ಮಾತ್ರೆಯೆನ್ನುವರು.

**ಗುರುः—** ದೀರ್ಘಸ್ವರ, ದೀರ್ಘಸ್ವರದಿಂದ ಕೂಡಿದ ಅಕ್ಷರ, ಪ್ಲುತಸ್ವರ, ಅನುಸ್ವಾರ, ವಿಸರ್ಗಗಳಿಂದ ಕೂಡಿದ ಅಕ್ಷರ ಸಂಯುಕ್ತಾ ಕ್ಷರದ ಹಿಂದಿರುವ ಅಕ್ಷರ ಇವುಗಳಿಗೆ ಗುರುವೆನ್ನುವರು. ಗುರುವನ್ನು "ಗ" ಎಂಬ ಅಕ್ಷರದಿಂದಾಗಲಿ "—" ಈ ಚಿನ್ಹದಿಂದಾಗಲಿ ಬರೆಯುವರು. ಗುರುವಿಗೆ ಎರಡು ಮಾತ್ರೆಗಳು. ಒಂದು ಅಕ್ಷರವನ್ನು ಗುರುವಾಗಲು ಅನೇಕ ಕಾರಣಗಳಿದ್ದರೂ ಒಂದೇ ಗುರುವೆಂದೇ ಗಣಿಸಬೇಕು.

**ಗಣः—** ಕೆಲವು ನಿಯಮಗಳಿಗನುಸರಿಸಿ ವಿಂಗಡಿಸಿದ ಅಕ್ಷರಗಳ ಗುಂಪಿಗೆ ಗಣವೆನ್ನುವರು; ಅದನ್ನು ವರ್ಣಗಣ ಮಾತ್ರಾಗಣವೆಂದು ಎರಡು ಪ್ರಕಾರವಾಗಿ ಹೇಳಬಹುದು. ವರ್ಣಗಣಗಳನ್ನು ಅಕ್ಷರಗಳಿಂದಲೂ, ಮಾತ್ರಾಗಣಗಳನ್ನು ಮಾತ್ರೆಗಳಿಂದಲೂ ಎಣಿಸುವರು.

ವರ್ಣಗಣವುಳ್ಳ ವೃತ್ತವು ವರ್ಣವೃತ್ತ. ಮಾತ್ರಾಗಣವುಳ್ಳ ವೃತ್ತವು ಮಾತ್ರಾವೃತ್ತ.

ಗುರು ಲಘು ವರ್ಣಗಳನ್ನು ಮೂರು ಮೂರಾಗಿ ವಿಂಗಡಿಸಿದರೆ ಎಂಟು ವರ್ಣಗಣಗಳಾಗುವವು.

| | | | | | | | |
|---|---|---|---|---|---|---|---|
| ಮ | — | — | — | ನ | ∪ | ∪ | ∪ |
| ಯ | ∪ | — | — | ಭ | — | ∪ | ∪ |
| ರ | — | ∪ | — | ಜ | ∪ | — | ∪ |
| ತ | — | — | ∪ | ಸ | ∪ | ∪ | — |

ಮಾತ್ರೆಗಳ ಗುಂಪಿಗೆ ಮಾತ್ರಾಗಣವೆನ್ನುವರು. ಅವುಗಳಲ್ಲಿ ಮೂರು, ನಾಲ್ಕು ಐದು ಮಾತ್ರೆಗಳನ್ನು ವಿಂಗಡಿಸುವುದರಿಂದ ಮೂರು ಪ್ರಕಾರದ ಮಾತ್ರಾಗಣಗಳಾಗುವವು. ಮಾತ್ರಾಗಣದಲ್ಲಿ ಒಂದು ಗುರುವಿನ ಮಾತ್ರೆಗಳನ್ನು ಬೇರೆ ಬೇರೆ ಮಾತ್ರಾಗಣಗಳಿಗೆ ಹಂಚಬಾರದು.

## ಈ ಪದ್ಯಸಂಗ್ರಹದಲ್ಲಿ ಕಂಡುಬರುವ ವರ್ಣವೃತ್ತಗಳು.

೧ **ಮತ್ತೇಭವಿಕ್ರೀಡಿತವೃತ್ತ**ದಲ್ಲಿ ಪ್ರತಿಪಾದದಲ್ಲಿ ಕ್ರಮವಾಗಿ ಸ, ಭ, ರ, ನ, ಮ, ಯ, ಗಣಗಳೂ ಒಂದು ಲಘು ಮತ್ತು ಒಂದು ಗುರು ಅಕ್ಷರಗಳೂ ಹೀಗೆ ಒಟ್ಟು ೨೦ ಅಕ್ಷರಗಳು ಇರುವವು.

| **ಪ್ರಸ್ತಾರಃ**— | ವಿಳಸ | ದ್ವಾಬ್ಧಿಹ್ಯವ | ನೋಪರ | ವ್ಯಪರಿ | ಪೂರ್ಣಾಂ |
|---|---|---|---|---|---|
| | ∪ ∪ — | — ∪ ∪ | — ∪ — | ∪ ∪ ∪ | — — — |
| | ಸ | ಭ | ರ | ನ | ಮ |

| ಬುಜಾತಾಂ | ಬು | ಜೋ |
|---|---|---|
| ∪ — — | ∪ | — |
| ಯ | ಲ | ಗಂ |

೨ **ಚಂಪಕಮಾಲಾವೃತ್ತ**ದಲ್ಲಿ ಪ್ರತಿಪಾದದಲ್ಲಿ ಕ್ರಮವಾಗಿ ನ ಜ ಭ ಜ ಜ ಜ ರ ಗಣಗಳು ಬರಬೇಕು.

**ಉದಾ:—**

| ಎಳನ | ಗೆಯುಣ್ಮೆ | ಮುದ್ದುವೊ | ಗದೊಳ್ಸು | ಧೆಯಿಂದ |
|---|---|---|---|---|
| ∪ ∪ ∪ | ∪ — ∪ | — ∪ ∪ | ∪ — ∪ | ∪ — ∪ |
| ನ | ಜ | ಭ | ಜ | ಜ |

| ಭಿಷೇಕಿ | ಪಂತೆಕಣ್ |
|---|---|
| ∪ — ∩ | — ∪ — |
| ಜ | ರ |

೩ **ಮಲ್ಲಿಕಾಮಾಲಾವೃತ್ತ**ದಲ್ಲಿ ರ ಸ ಜ ಜ ಭ ರ ಗಣಗಳು ಬರಬೇಕು.

| ಎನ್ನಮಾ | ತನುಪೇ | ಕ್ಷೆಗೆಯ್ಯ | ದೆಪಾಲ | ನೀಂಟಿದೊ | ಡಯ್ಯಕೇಳ್ |
|---|---|---|---|---|---|
| — ∪ — | ∩ ∩ — | ∪ — ∪ | ∪ — ∪ | — ∪ ∪ | — ∪ — |
| ರ | ಸ | ಜ | ಜ | ಭ | ರ |

೪ **ಶಾರ್ದೂಲವಿಕ್ರೀಡಿತ**ದಲ್ಲಿ ಮ ಸ ಜ ಸ ತ ತ ಗಣಗಳೂ ಒಂದು ಗುರುವೂ ಇರುವುವು.

**ಉದಾ:—**

| ಭೂನಾಥ | ರ್ಕಳಬಾ | ಳ್ಕೆಚಿತ್ತ | ಕೆಸದಾ | ತಳ್ಪಂಕ | ಮೆಷ್ಟೆಷ್ಟು | ಧಾ। |
|---|---|---|---|---|---|---|
| — — — | ∪ ∪ — | ∪ — ∪ | ∪ ∪ — | — — ∪ | — — ∪ | — |
| ಮ | ಸ | ಜ | ಸ | ತ | ತ | ಗಂ |

೫ **ಮಹಾಸ್ರಗ್ಧರಾವೃತ್ತ**ದಲ್ಲಿ ಅನುಕ್ರಮವಾಗಿ ಸ, ತ, ತ, ನ, ಸ, ರ, ರ, ಗಣಗಳೂ ಒಂದು ಗುರುವೂ ಇರುತ್ತವೆ.

**ಉದಾ:**

| ತೆವರೆ | ಲ್ಲಂದೇವ | ತಾಮಂದಿ | ರನಿವ | ಹಮೆನಿ | ವ್ವಸ್ಥಳೀ |
|---|---|---|---|---|---|
| ∪ ∪ — | — — ∪ | — — ∪ | ∪ ∪ ∪ | ∪ ∪ — | — ∪ — |
| ಸ | ತ | ತ | ನ | ಸ | ರ |

| ರಾಜಿಯೆ | ಲ್ಲಂ |
|---|---|
| — ∪ — | |
| ರ | ಗಂ |

## ಮಾತ್ರಾವೃತ್ತಗಳಲ್ಲಿಯ ಕೆಳಗಿನ ವೃತ್ತಗಳು ಈ ಪದ್ಯ ಸಂಗ್ರಹದಲ್ಲಿ ಉದ್ಧೃತವಾಗಿವೆ.

೧ **ಕಂದಃ**— ೧ ನೆಯ ಮತ್ತು ೩ ನೆಯ ಪಾದಗಳಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಮೂರು ಮೂರು ಗಣಗಳೂ ೨ ನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಐದು ಐದು ಗಣಗಳೂ ಕಂದದಲ್ಲಿ ಬರುವವು. ಕಂದದ ಮೊದಲಿನ ಅಥವಾ ಕಡೆಯ ಅರ್ಧದ ಎರಡೂ ಪಾದಗಳಲ್ಲಿ ಕೂಡಿರುವ ಎಂಟು ಗಣಗಳಲ್ಲಿ ೧, ೩, ೫, ಮತ್ತು ೭ ನೆಯ ಗಣಗಳಲ್ಲಿ ಮಧ್ಯಗುರುವಿರಬಾರದು. ಆದರೆ ೬ ನೆಯ ಗಣದಲ್ಲಿ ಮಧ್ಯ ಗುರುವಾಗಲೀ ನಾಲ್ಕೂ ಲಘುಗಳಾಗಲೀ ಇರಬೇಕು.

**ಉದಾಃ**—

| | | |
|---|---|---|
| ಆಪ | ಟ್ಟಣದೊಳ | ಗಿರ್ಪಂ। |
| — — | ⏑ ⏑ ⏑ ⏑ | — — |

| | | | | |
|---|---|---|---|---|
| ಗೋಪ | ಧ್ವಜ ಪಾ | ದ ಪೂಜ | ಕಂ ಮೃದು | ಮಧುರಾ॥ |
| — — | ⏑ ⏑ — | ⏑ — ⏑ | — ⏑ ⏑ | ⏑ ⏑ — |

೨ **ಷಟ್ಪದಿಗಳುಃ**— ಇವುಗಳಲ್ಲಿ ಆರು ಪಾದಗಳು ಇರುವವು. ೧, ೨, ೪, ೫ ಪಾದಗಳು ಸಮವಾಗಿರುವವು. ೩ ಮತ್ತು ೬ ನೆಯ ಪಾದಗಳು ಉಳಿದ ಪಾದಗಳ ಒಂದೂವರೆಪಟ್ಟು ಇದ್ದು ಅಂತ್ಯದಲ್ಲಿ ಒಂದು ಗುರುವು ಹೆಚ್ಚಿಗೆ ಇರುವುದು.

ಷಟ್ಪದಿಗಳಲ್ಲಿ ೬ ಪ್ರಕಾರಗಳುಂಟು. ಅವುಗಳಲ್ಲಿ ಭಾಮಿನಿ ಷಟ್ಪದಿಯು ಈ ಪದ್ಯಸಂಗ್ರಹದಲ್ಲಿ ಬಂದಿರುವುದು. ಅದರ ಲಕ್ಷಣಃ— ೧, ೨ ೪ ೫ ಪಾದಗಳಲ್ಲಿ ಮೊದಲು ಮೂರು ಮಾತ್ರೆಗಳ ೧ ಗಣ ಅದರ ಮೇಲೆ ೪ ಮಾತ್ರೆಗಳ ಒಂದುಗಣ ಹೀಗೆ ಎರಡೆರಡು ಗಣಗಳ ಎರಡು ಗುಂಪೂ ೩ ಮತ್ತು ೬ ನೆಯ ಪಾದಗಳಲ್ಲಿ ಅದೇ ಪ್ರಕಾರದ ಗಣಗಳ ೩ ಗುಂಪುಗಳೂ ಕಡೆಯಲ್ಲಿ ಒಂದು ಗುರುವೂ ಬಂದರೆ ಭಾಮಿನಿ ಷಟ್ಪದಿಯಾಗುತ್ತದೆ.

ಉದಾ: ೩ | ೪ | ೩ | ೪ |

೩ | ೪ | ೩ | ೪ |

೩ | ೪ | ೩ | ೪ | ೩ | ೪ | ೨॥

| ಬಂದೆ | ನಂಬುಧಿ | ದಾಂಟಿ | ಕಂಡೆನು। |
|---|---|---|---|
| — ᴗ | — ᴗ ᴗ | — ᴗ | — ᴗ ᴗ |

| ಸಂದ | ಸುವ್ರತೆ | ಯಂಘ್ರಿ | ಕಮಲವ। |
|---|---|---|---|
| — ᴗ | — ᴗ ᴗ | — ᴗ | ᴗ ᴗ ᴗ ᴗ |

| ನೆಂದೆ | ನಲು ವೊಗ | ನೆಗಹಿ | ನೋಡಿದ | ಳಾಮು | ಹೀರುಹ | ವ॥ |
|---|---|---|---|---|---|---|
| — ᴗ | ᴗ ᴗ ᴗ ᴗ | ᴗ ᴗ ᴗ | — ᴗ ᴗ | — ᴗ | — ᴗ ᴗ | — |

೩ **ತ್ರಿಪದಿಗಳು.** ತ್ರಿಪದಿಯಲ್ಲಿ ೩ ಪಾದಗಳೂ ಒಟ್ಟು ೧೧ ಗಣಗಳೂ ಇರುವವು. ಅವುಗಳಲ್ಲಿ ೧, ೨ ಪಾದಗಳಲ್ಲಿ ನಾಲ್ಕು ನಾಲ್ಕು ಗಣಗಳೂ ೩ ನೆಯ ಪಾದದಲ್ಲಿ ೩ ಗಣಗಳೂ ಇರುತ್ತವೆ. ೨, ೩ ನೆಯ ಪಾದಗಳ ೨ ನೆಯ ಗಣದಲ್ಲಿ ೩ ಮಾತ್ರೆಗಳೂ ಉಳಿದ ಎಲ್ಲ ಗಣಗಳಲ್ಲಿ ಐದೈದು ಮಾತ್ರೆಗಳೂ ಇರುತ್ತವೆ.

ಉದಾ:—

| ಕಡಲೆಯನು | ಗೋದಿಯನು | ಮಡಿಕುದ್ದು | ಬೆಳೆದರೂ। |
|---|---|---|---|
| ᴗ ᴗ ᴗ ᴗ ᴗ | — ᴗ ᴗ ᴗ | ᴗ ᴗ — ᴗ | ᴗ ᴗ ᴗ — |

| ಸುಡಬೇಕು | ನಾಡ | ನೆಂದವನ | ಬಾಯೊಳಗೆ। |
|---|---|---|---|
| ᴗ ᴗ — ᴖ | — ᴖ | — ᴗ ᴗ ᴗ | — ᴗ ᴗ ᴗ |

| ಪುಡಿಗಡಬು | ಬೀಳ್ಗು | ಸರ್ವಜ್ಞ। |
|---|---|---|
| ᴗ ᴗ ᴗ ᴗ ᴗ | — ᴗ | — — ᴗ |

೪ **ರಗಳೆ.** ರಗಳೆಯಲ್ಲಿ ಇಷ್ಟೇ ಪಾದವಿರಬೇಕೆಂಬ ನಿಯಮವಿಲ್ಲ. ಪ್ರತಿಯೊಂದು ಪಾದದಲ್ಲಿ ಸಮಾನವಾದ ಮಾತ್ರಾಗಣಗಳು ಇರಬೇಕು. ರಗಳೆಯಲ್ಲಿ ಮುಖ್ಯವಾಗಿ ಮೂರು ವಿಧಗಳುಂಟು. ಅವುಗಳಲ್ಲಿ ಕಣ್ಣಪ್ಪನ ಮಹಾತ್ಮೆಯು ಲಲಿತ ರಗಳೆಯಲ್ಲಿದೆ. ಅದರ ಲಕ್ಷಣ ಪ್ರತಿಪಾದದಲ್ಲಿ ಐದೈದು ಮಾತ್ರೆಗಳ ನಾಲ್ಕು ಗಣಗಳಿರುವವು.

**ಉದಾಃ—** ಇರುತಿರು | ತ್ತೊಂದು ದಿವ | ಸಂ ಬೇಂಟಿ | ಗೆಂದಲ್ಲಿ
ᑌ ᑌ ᑌ — | — ᑌ ᑌ ᑌ | — — ᑌ | — — ᑌ

ಸಾಂಗತ್ಯಃ ಇದು ಹಾಡು. ಇದರಲ್ಲಿ ನಾಲ್ಕು ಪಾದಗಳಿದ್ದು ಸಾಮಾನ್ಯವಾಗಿ ೧, ೩ ನೆಯ ಪಾದಗಳಲ್ಲಿ ೫ ಮಾತ್ರೆಯ ೪ ಗಣಗಳೂ ೨, ೪ ನೆಯ ಪಾದಗಳಲ್ಲಿ ೫ ಮಾತ್ರೆಗಳ ೩ ಗಣಗಳೂ ಇರಬೇಕೆಂದು ಕನ್ನಡ ಕೈಪಿಡಿಕಾರರ ಅಭಿಪ್ರಾಯ. ಅನೇಕ ಕಡೆಗಳಲ್ಲಿ ದೀರ್ಘವನ್ನು ಪ್ಲುತವಾಗಿಯಾಗಲೀ ಹ್ರಸ್ವವಾಗಿಯಾಗಲೀ ಹ್ರಸ್ವವನ್ನು ದೀರ್ಘವಾಗಿಯಾಗಲೀ ಎರಡಕ್ಷರಗಳನ್ನು ಒಂದಕ್ಷರದಂತೆಯಾಗಲೀ ಹಾಡಿ ಮಾತ್ರೆಗಳನ್ನು ಕೂಡಿಸಿಕೊಳ್ಳುವ ಪರಿಪಾಠವುಂಟು.

---



# ಅನುಬಂಧ ೨

## ವಚನಕಾರರ ಮುದ್ರಿಕೆಗಳು.

ಪ್ರತಿಯೊಬ್ಬ ವಚನಕಾರನಿಗೆ ಅವನ ಒಂದು ವಿಶಿಷ್ಟ ಮುದ್ರಿಕೆ ಇರುತ್ತದೆ ಅದರಿಂದಲೇ ಒಂದು ವಚನವು ಯಾವನದಿರುತ್ತದೆಂಬದನ್ನು ಕಂಡು ಹಿಡಿಯಬೇಕಾಗುತ್ತದೆ. ಈ ಗ್ರಂಥದಲ್ಲಿ ಬಂದ ವಚನಗಳ ಮುದ್ರಿಕೆಗಳು ಕೆಳಗೆ ಕೊಡಲ್ಪಟ್ಟಿವೆ.

೧ **ಕೂಡಲಸಂಗಮದೇವಃ**— ಬಸವ. ಇವನು ವಿಜಾಪುರ ಜಿಲ್ಹೆಯಲ್ಲಿ ಬಾಗೇವಾಡಿ ಗ್ರಾಮದಲ್ಲಿ ಜನಿಸಿ ಕಲ್ಯಾಣಪಟ್ಟಣದಲ್ಲಿ ಬಿಜ್ಜಳನ ಮಂತ್ರಿಯಾಗಿ ವೀರಶೈವ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದನು. ಮತ್ತು ಕಡೆಗೆ ಮಲಾಪಹಾರೀ ಕೃಷ್ಣಾನದಿಗಳ ಸಂಗಮ ಸ್ಥಳದಲ್ಲಿ ಇರುವ ಕೂಡಲ ಸಂಗಮನಲ್ಲಿ ಐಕ್ಯನಾದನು. ಕಾಲ ಕ್ರಿ. ಶ. ೧೧೩೨ ರಿಂದ ೧೧೬೮.

೨ **ಕೂಡಲ ಚನ್ನಸಂಗಮದೇವಃ**—ಚನ್ನಬಸವ. ಇವನು ಬಸವನ ಅಕ್ಕನಾದ ನಾಗಲಾಂಬಿಕೆಯ ಮಗನು. ಅತ್ಯಂತ ಜ್ಞಾನಿಯಾಗಿದ್ದನು. ಬಿಜ್ಜಳನ ಕೊಲೆಯಾದ ಬಳಿಕ ಕಲ್ಯಾಣಪಟ್ಟಣದಲ್ಲಿ ಅವ್ಯವಸ್ಥೆಯಾಗಲು ಅವನು ಅನೇಕ ಜನ ಶರಣರೊಂದಿಗೆ ಉಳಿವಿಗೆ ಹೋಗಿ ಅಲ್ಲಿಯೇ ಐಕ್ಯನಾದನು.

೩ **ಗುಹೇಶ್ವರಃ**— ಅಲ್ಲಮಪ್ರಭು. ಹರಿಹರ ಕವಿಯು ಇವನ ಗ್ರಾಮವು ಬಳ್ಳಿಗಾವೆ ಎಂದು ಹೇಳಿರುವನು. ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮವನ್ನು ಉಪದೇಶಿಸುತ್ತ ಸಂಚರಿಸಿದನು. ಕಲ್ಯಾಣಪಟ್ಟಣದಲ್ಲಿದ್ದು ಅತ್ಯಂತ ಜ್ಞಾನಿ ಎಂದು ಎಲ್ಲರಿಂದಲೂ ಮನ್ನಣೆ ಹೊಂದಿದನು. ಕಲ್ಯಾಣಪಟ್ಟಣದಲ್ಲಿ ಅವ್ಯವಸ್ಥೆಯಾದ ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿಯೇ ಐಕ್ಯನಾದನು.

೪ **ಚೆನ್ನಮಲ್ಲಿಕಾರ್ಜುನಃ**— ಮಹಾದೇವಿಯಕ್ಕ. ಈಕೆಯು ಶಿವಮೊಗ್ಗೆ ಜಿಲ್ಲೆಯಲ್ಲಿರುವ ಉಡತಡಿ ಗ್ರಾಮದವಳು. ಅಲ್ಲಿಯ ಅರಸನಾದ ಕೌಶಿಕನನ್ನು ಲಗ್ನವಾಗಲು ಒಪ್ಪದೆ ಕಲ್ಯಾಣಕ್ಕೆ ಬಸವೇಶ್ವರನ ಬಳಿಗೆ ಬಂದು ಅಲ್ಲಿಯೇ ಇರಹತ್ತಿದಳು. ಆಕೆಯ ವಚನಗಳು ಬಹು ಶ್ರೇಷ್ಠತರದವಾಗಿವೆ. ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳನ ತರುವಾಯ ಕಲಹಗಳೇಳಲು ಶ್ರೀಶೈಲಕ್ಕೆ ಹೋಗಿ ಅಲ್ಲಿ ಐಕ್ಯ ಹೊಂದಿದಳು.

೫ **ಕಪಿಲಸಿದ್ಧಮಲ್ಲಿಕಾರ್ಜುನಃ**— ಸಿದ್ಧರಾಮ. ಇವನು ಸೊಲ್ಲಾಪುರದಲ್ಲಿ ಇದ್ದು ಬಸವೇಶ್ವರ ಕಾಲದಲ್ಲಿ ಶಿವಯೋಗದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು.

೬ **ರಾಮನಾಥಃ**— ದೇವರ ದಾಸಿಮಯ್ಯ. ಇವನು ೧೦೦೪ ರಿಂದ ೧೦೫೦ ರವರೆಗೆ ಆಳಿದ ಚಾಲುಕ್ಯ ಚಕ್ರವರ್ತಿಯಾದ ಜಯಸಿಂಹನ ಕಾಲದಲ್ಲಿದ್ದನು. ಇವನ ಗ್ರಾಮವು ಸಿಂದಗಿಯಿಂದ ಪೂರ್ವಕ್ಕೆ ೩೦ ಮೈಲು ದೂರವಿರುವ ಮುದ್ದನೂರು ಇದೆ. ಇವನು ಜೈನರ ಕೂಡ ವಾದಿಸಿ ರಾಜನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು.

೭ **ಸಕಳೇಶ್ವರದೇವಃ**— ಸಕಳೇಶ ಮಾದರಸ. ಇವನು ಕಲ್ಲುಕುರಿಕೆ ಎಂಬ ಗ್ರಾಮದ ರಾಜನಾಗಿದ್ದನು. ಮಹಾಕವಿಯಾದ ಕೆರೆಯ ಪದ್ಮರಸನ ಅಜ್ಜನು. ಇವನು ತನ್ನ ರಾಜ್ಯವನ್ನು ತೊರೆದು ಶ್ರೀಶೈಲಕ್ಕೆ ಬಂದು ಅಲ್ಲಿ ಅನೇಕ ದಿನಗಳಿದ್ದು ಕಲ್ಯಾಣಕ್ಕೆ ಬಸವೇಶ್ವರನಲ್ಲಿಗೆ ಬಂದು ಕಲ್ಯಾಣವು ಹಾಳಾದ ಬಳಿಕ ಗೋಪೆ ಎಂಬ ಗ್ರಾಮದಲ್ಲಿ ಬಂದು ಇರಹತ್ತಿದನು. ಮುಂದೆ ಶ್ರೀಶೈಲಕ್ಕೆ ಹೋಗಿ ಅಲ್ಲಿಯೇ ಐಕ್ಯ ಹೊಂದಿದನು.

೮ **ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಃ**— ಉರಿಲಿಂಗಪೆದ್ದಿ. ಈತನು ತೆಲುಗು ದೇಶದಲ್ಲಿದ್ದ ಅವಸಿಕಂದಾರ ಎಂಬ ಗ್ರಾಮದವನು. ಇವನು ಅಸ್ಪೃಶ್ಯನಿದ್ದು ಮೊದಲು ಕಳ್ಳತನ ಮಾಡುತ್ತಿದ್ದನು. ಆವರೆ ಉರಿಲಿಂಗದೇವನೆಂಬ ಶಿವಶರಣನ ಸಾನ್ನಿಧ್ಯದಿಂದ ತನ್ನ ದುರ್ಗುಣಗಳನ್ನು ಬಿಟ್ಟು ಅತ್ಯಂತ ವಿದ್ವಾಂಸನಾದನು. ಮತ್ತು ತನ್ನ ಗುರುವು ತೀರಿದ ಬಳಿಕ ಅವನ ಸ್ಥಾನದಲ್ಲಿ ಪಟ್ಟವೇರಿದನು. ಇವನು ೧೨ ನೇ ಶತಮಾನದ ಅಂತ್ಯದಲ್ಲಿದ್ದನು.

೯ **ಕಯ್ಯುಳಿಗತ್ತಿ ಕೆಡೆಯಾಗಬೇಡ ಅರಿನಿಜಾತ್ಮರಾಮ ರಾಮನಾಃ**— ಚನ್ನಯ್ಯ. ಇವನು ಮಾದರವನು. ಕರಿಕಾಲ ಚೋಳನ ಕುದುರೆಗಳಿಗೆ ಹುಲ್ಲು ಹಾಕುತ್ತ ಗುಪ್ತಾರಾಧನೆಯಿಂದ ಇದ್ದನು. ಪರಮಾತ್ಮನು ಅವನಿಗೆ ಪ್ರೀತನಾಗಿ ಅವನರ್ಪಿಸುವ ಅಂಬಲಿಯನ್ನು ಉಣ್ಣುತ್ತಿದ್ದನು. ಚೋಳ ರಾಜನು ಇದನ್ನು ತಿಳಿದು ಅವನನ್ನು ಬಹಳವಾಗಿ ಮನ್ನಿಸಲು ತನ್ನ ಗುಪ್ತ ಭಕ್ತಿಯು ಹೊರಬಿದ್ದಿತೆಂದು ತನ್ನ ಶಿರಸ್ಸನ್ನು ಕತ್ತರಿಸಿಕೊಳ್ಳಲು ಅನುವಾಗಲು ಪರಮಾತ್ಮನು ಅವನಿಗೆ ಮುಕ್ತಿಯನ್ನು ಕೊಟ್ಟನು.

೧೦ **ಸೊಡ್ಡಳಾಃ**— ಸೊಡ್ಡಳ ಬಾಚರಸ. ಇವನು ಬಿಜ್ಜಳನ ಆನೆ ಮತ್ತು ಕುದುರೆಯ ದಳದ ಮೇಲೆ ಅಧಿಪತಿಯಾಗಿದ್ದನು. ಗುಜರಾಥ ದೇಶದಿಂದ ಸೋಮೇಶ್ವರನನ್ನು ತಂದು ಮನೆಯಲ್ಲಿಟ್ಟುಕೊಂಡು ಪೂಜಿಸುತ್ತಿದ್ದನು.

೧೧ **ಶಂಭು ಜಕ್ಕೇಶ್ವರಾಃ**— ಸತ್ಯಕ್ಕ. ಈಕೆಯು ಜಂಬೂರವಳು. ಶಿವಶರಣರ ಮನೆಗಳನ್ನುಡುಗುತ್ತ ಶಿವಭಕ್ತಿಯಿಂದ ಜೀವಿಸುತ್ತಿದ್ದಳು. ಈಕೆಯೂ ಅನೇಕ ವಚನಗಳನ್ನು ರಚಿಸಿರುವಳು.

೧೨ **ಅಂಬಿಗರ ಚೌಡಯ್ಯಃ**— ಚೌಡಯ್ಯ. ಈತನು ಚೌಡದಾನಪುರದವನು. ಜಾತಿಯಿಂದ ಅಂಬಿಗನು.

೧೩ **ಅಮಳೇಶ್ವರ ಲಿಂಗಃ**— ಆಯುದಕ್ಕಿ ಮಾರಯ್ಯ.

೧೪ **ಆತುರವೈರಿ ಮಾರೇಶ್ವರಾಃ**— ನಗಿಮಾರಿ ತಂದೆ.

೧೫ **ಅಖಂಡೇಶ್ವರಾಃ**— ಷಣ್ಮುಖಸ್ವಾಮಿ

೧೬ **ಕೂಡಲಸಂಗಮದೇವರಲ್ಲಿ ಬಸವಣ್ಣಃ**— ಬಿಬ್ಬಿದೇವಯ್ಯ.

# ಶುದ್ಧಾಶುದ್ಧ ಪತ್ರಿಕೆ.



| ಪುಟ. | ಓಳಿ | ಅಶುದ್ಧ. | ಶುದ್ಧ. |
|---|---|---|---|
| ೬ | ೧೮ | ನಾದ | ನಾಡ |
| ೯ | ೬ | ಮಿತಂ ಶ್ರೀಯುತಂ | ಮಿತ ಶ್ರೀಯುತಂ |
| ೧೨ | ೬ | ಯ್ಪಿಡುತುಂ | ಯ್ವಿಡುತುಂ |
| ೧೩ | ೧೦ | ದಾರೆ | ಸಾರೆ |
| ೧೫ | ೭ | ನಘುಹರ | ನಘುಹರ |
| ೧೫ | ೮ | ನವುದುರ್ಗಣುಗಳ್ | ನವುದುರ್ಗಣೆಗಳ್ |
| ೨೦ | ೮ | ಧರ್ಮನ್ನೇಳ್ಗೆ | ಧರ್ಮದಿನೇಳ್ಗೆ |
| ೨೨ | ೧೩ | ನರೇಂದ್ರನ | ನರೇಂದ್ರನಂ |
| ೨೪ | ೨೦ | ಪೋರಬೇಡಂ | ಪೊರಬೇಡಂ |
| ,, | ೨೧ | ಮಡೆ | ಮರೆ |
| ೬೪ | ೨೭ | ಕೇಳಿದಂತೆ | ಕೇಳಿತಂತೆ |
| ೬೭ | ೨೧ | ಮದುವೆಯಾಗಿವೆಯುಲ್ಲ | ಮದುವೆಯಾಗಿದೆಯುಲ್ಲ |
| ೭೦ | ೩ | ತನುಗಾದೊಡೆಗೇನು | ತಮಗಾದೊಡೆಗೇನು |
| ೭೧ | ೮ | ಚಲ್ಲಿಕಾರ್ಜುನ | ಚನ್ನಮಲ್ಲಿಕಾರ್ಜುನ |
| ೭೫ | ೧೩ | ಮೆಚ್ಚನು | ಮೆಚ್ಚರು |
| ೯೮ | ೯ | ತಾತ್ಪ್ಯರ್ಥ | ತತ್ಪ್ಯರ್ಥ |
| ೯೮ | ೨೩ | ಅಭೂತಪೂರ್ಣವಾದ | ಅಭೂತಪೂರ್ವವಾದ |
| ೯೮ | ೨೫ | ಕವಿಪುಂಗರವರು | ಕವಿಪುಂಗವರು |
| ೧೦೦ | ೧೮ | ಭಿಯಿಷ್ಠ | ಭೂಯಿಷ್ಠ |
| ,, | ೧೮ | ಕ್ಲಿಷ್ಠ | ಕ್ಲಿಷ್ಟ |
| ,, | ೬೩ | ಕಾವ್ಯ | ಕಾವ |
| ,, | ೬೮ | ಅಂಧಃಕಾರ | ಅಂಧಕಾರ |
| ,, | ೨೯ | ,, | ,, |
| ೧೦೧ | ೨೭ | ಶಾಶನ | ಶಾಸನ |
| ೧೦೨ | ೨೨ | ಪೈಸೂರು | ಮೈಸೂರು |
| ೧೦೫ | ೨೯ | ಕುಳಿತೆನ | ಕುಳಿತೆನು |

